ಮಾತನಾಡುತ್ತಿರುವಾಗ ಇತರರೊಂದಿಗೆ ವಾದಿಸುತ್ತಾ ಆಗಲೀ, ಹಾಸಿಗೆಯಲ್ಲಿ ಮಲಗಿ ಹೆಂಡತಿ ಮಕ್ಕಳೊಂದಿಗೆ ಸಂತೋಷವಾಗಿ ಮಾತನಾಡುವಾಗಾಗಲೀ, ಪೂರ್ತಿ ನಮಾಜಾಗಿರುವ ಆರಾಧನೆಯನ್ನು ಮಾಡಬಹುದು.

ಹಳೆ ನಮಾಜ್ ಪ್ರತಿ ದಿನ ನೇಮಿಸಲ್ಪಟ್ಟ ಕಾಲದಲ್ಲಿ ಮಾಡುತ್ತಿದ್ದರೂ ಅದಕ್ಕೆ ಕೆಲವು ವಿಧಿವಿಧಾನಗಳು ಇವೆ. ಹೊಸ ನಮಾಜ್‌ನಲ್ಲಿ ಅಂತಹವು ಯಾವುವೂ ಇಲ್ಲ. ಹಳೆ ನಮಾಜ್‌ನಲ್ಲಿ ಏಳು ಆಯತ್‌ಗಳು ಓದುವುದು, ಮೊಣಕಾಲಿನ ಮೇಲೆ ಕುಳಿತುಕೊಂಡು ಬಗ್ಗಿ ತಲೆ ಭೂಮಿಗೆ ಇಟ್ಟು ಪ್ರಾರ್ಥನೆ ಮಾಡುವುದು ಇದೆ. ಹೊಸ ನಮಾಜ್‌ನಲ್ಲಿ ಅಂತಹ ಕ್ರಿಯೆಗಳು ಇರುವುದಿಲ್ಲ. ಹಳೆ ನಮಾಜ್‌ನಲ್ಲಿ ನಿರ್ಣಿತ ಸಮಯವಿರುತ್ತದೆ. ಹೊಸ ನಮಾಜ್‌ನಲ್ಲಿ ಪ್ರತ್ಯೇಕವಾದ ಸಮಯವಿರುವುದಿಲ್ಲ. ಎಲ್ಲ ಸಮಯಗಳಲ್ಲಿ ಆಚರಿಸುವುದಾಗಿ ಇರುತ್ತದೆ. ಹಳೆ ನಮಾಜ್‌ನಲ್ಲಿ ಸಾಮೂಹಿಕವಾಗಿ ಜನದೊಂದಿಗೆ ಕೂಡಿ ಮಾಡುವುದು ಇದೆ. ಆದರೇ ಹೊಸ ನಮಾಜ್‌ನಲ್ಲಿ ಪಕ್ಕದ ಮನುಷ್ಯನೊಂದಿಗೆ ಸಂಬಂಧ ಇಲ್ಲದಂತೆ ಅಡವಿಯಲ್ಲಾದರೂ ಒಬ್ಬನೇ ಮಾಡಬಹುದು. ಹೀಗೆ ಎಷ್ಟೋ ವ್ಯತ್ಯಾಸಗಳು ಇರುವುದರಿಂದ ಹಳೆ ನಮಾಜನ್ನು ಮಾಡುತ್ತಾ ಹೊಸ ನಮಾಜನ್ನು ನೆಲೆಗೊಳಿಸಬೇಕೆಂದಿದ್ದಾನೆ. ಹಾಗೆ ನೆಲೆಗೊಳಿಸುವುದರಿಂದ ಹಳೆ ನಮಾಜನ್ನು ಮಾಡುವ ಸಮಯದಲ್ಲಿ ಕೂಡಾ ಹಳೆ ನಮಾಜ್‌ನ್ನು ಮಾಡುತ್ತಲೇ ಹೊಸ ನಮಾಜ್‌ನ್ನು ಅದರಲ್ಲಿಯೇ ಮಿಳಿತವಾಗಿ ಮಾಡಬಹುದು. ನಿನ್ನ ಶರೀರ ಏನು ಮಾಡುತ್ತಿದ್ದರೂ, ನಿಂತಾದರೂ, ಕುಳಿತಾದರೂ, ಮಲಗಾದರೂ ಏನು ಮಾಡುತ್ತಿದ್ದರೂ ಅದನ್ನು ಬಿಡದೆ ಹೊಸ ನಮಾಜ್‌ನ್ನು ಮಾಡಬಹುದು. ಇದೆಲ್ಲಾ ದೊಡ್ಡ ವಿಚಿತ್ರವಾಗಿ ಯಾವುದೋ ಮಾಯೆಯಂತೆ ಮೊದಲು ಕಾಣಿಸಿದರೂ, ತಿಳಿದ ನಂತರ ಹೊಸ ನಮಾಜ್ ಎಷ್ಟೋ ಸುಲಭವಾದುದೆಂದು ಅನಿಸುತ್ತದೆ.

**ಪ್ರಶ್ನೆ :– ಈ ದಿನ ಮುಸ್ಲಿಮ್‌ರು ಅಲ್ಲಾಹ್ (ದೇವರು) ಎಂದರೂ, ಮುಹಮ್ಮದ್ ಪ್ರವಕ್ತ ಎಂದರೂ ಎಷ್ಟೋ ಇಷ್ಟವಾಗಿ ಇರುವುದೇ ಅಲ್ಲದೆ ಅವರ ಮಾತನ್ನು**

**ಎಷ್ಟೋ ಗೌರವವಾಗಿ ಸ್ವೀಕರಿಸುತ್ತಾರೆ, ಆಚರಿಸುತ್ತಾರೆ. ಹಾಗಿರುವಾಗ ಮುಸ್ಲಿಮ್ ಸಮಾಜದಲ್ಲಿ ನಮಾಜ್ ಒಂದೇ ಇದೆ. ಅದನ್ನು ನಿರ್ಣಿತ ಸಮಯಗಳಲ್ಲಿ ಎಲ್ಲರೂ ಸೇರಿ ಸಾಮೂಹಿಕವಾಗಿ, ಕ್ರಮಶಿಕ್ಷಣದಿಂದ, ಶುಚಿಶುಭ್ರತೆಗಳೊಂದಿಗೆ, ಕಾಲು, ಕೈಗಳು, ಮುಖ ತೊಳೆದುಕೊಂಡು ಪ್ರಾರ್ಥನೆಯಲ್ಲಿ (ನಮಾಜ್‌ನಲ್ಲಿ) ಪಾಲ್ಗೊಂಡು ತೃಪ್ತಿ ಹೊಂದುತ್ತಿದ್ದಾರೆ. ಕೆಲವರಿಗೆ ಬಿಡುವಿದ್ದರೇ ಐದು ಹೊತ್ತು ನಮಾಜ್ ಮಾಡುವವರು ಇದ್ದಾರೆ. ಅಷ್ಟೇ ಅಲ್ಲದೆ ಮುಸ್ಲಿಮ್‌ರು ಎಂದರೆ ವಿಶ್ವಾಸ, ವಿಶ್ವಾಸ ಎಂದರೇ ಮುಸ್ಲಿಮ್‌ರು ಎನ್ನುವಂತೆ ಇದೆ. ಖುರ್‌ಆನ್ ಗ್ರಂಥವನ್ನು ಎಷ್ಟೋ ಗೌರವವಾಗಿ ಓದಿ ಅದರಲ್ಲಿ ದೇವರು ಹೇಳಿದ ಸೂಚನೆಗಳನ್ನು ತಿಳಿಯುತ್ತಿರುವರು. ಅಷ್ಟು ಭಕ್ತಿಯಾಗಿ ಇರುವವರಿಗೆ ನಿಮಗೆ ತಿಳಿದ ಎರಡನೆ ಹೊಸ ನಮಾಜ್ ತಿಳಿಯದಂತಿರುತ್ತದಾ? ಹಾಗೆ ಇರುವಂತೆ ಹದೀಸು ಪಂಡಿತರಿಗಾಗಲೀ, ಖುರ್‌ಆನ್ ಬೋಧಕರಿಗೆ ಆಗಲಿ ತಿಳಿದಿಲ್ಲವಾ? ನೀವು ಹೇಳುವವರೆಗು ಅವರಿಗೆ ತಿಳಿಯ ದೆನ್ನುತ್ತೀರಾ? ಮಸೀದ್‌ಗಳಲ್ಲಿ ಇಮಾಂಸಾಬ್‌ಗಳು ನಿತ್ಯ ಖುರ್‌ಆನ್ ಪಠಿಸುತ್ತಿರುವರು. ಅವರು ಕೂಡಾ ನೀವು ಹೇಳಿದ್ದನ್ನು ಹೇಳಲಿಲ್ಲವೇ? ನೀವು ತೆಲುಗುನಲ್ಲಿ ಬರೆದ ಖುರ್‌ಆನ್‌ನನ್ನು ಓದಿ ಹೇಳುತ್ತಿದ್ದೀರ. ಖುರ್‌ಆನ್ ಗ್ರಂಥ ಅರಬ್ಬೀ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಅರಬ್ಬೀ ಭಾಷಾ ಪಂಡಿತರು ನೀವು ಹೇಳಿದ ವಾಕ್ಯವನ್ನು ಓದಿರುತ್ತಾರಲ್ಲವೆ! ನೀವು ಹೇಳಿದ (4–103) ವಾಕ್ಯದಲ್ಲಿ ಮತ್ತೊಂದು ನಮಾಜ್‌ನ್ನು ಕುರಿತು ಅದನ್ನು ನೆಲೆಗೊಳಿಸಿರೆಂದು ಹೇಳಿದ್ದನ್ನು ಕುರಿತು ಹೇಳಿರುವುದು ತಿಳಿದಿರುವುದಿಲ್ಲವಾ? ಅರಬ್ಬೀ ಪಂಡಿತರಿಗೆ ತಿಳಿಯದ ವಿಷಯವನ್ನು ನೀವು ಹೇಳುತ್ತಿದ್ದೀರ? ಎಂದು ನಮಗೆ ಅನುಮಾನ (ಪ್ರಶ್ನೆ) ಬರುತ್ತಿದೆ. ಇದಕ್ಕೆ ನೀವು ಏನು ಉತ್ತರ ಹೇಳುತ್ತೀರ?**

**ಉತ್ತರ :–** ಖುರ್‌ಆನ್ ಗ್ರಂಥವನ್ನು ಅರಬ್ಬೀ ಭಾಷೆಯಲ್ಲಿ ಬರೆದ ಮಾತು ನಿಜ. ಅರಬ್ಬೀ, ತೆಲುಗು ತಿಳಿದ ಪಂಡಿತರು ಅರಬ್ಬೀ ಭಾಷೆಯಲ್ಲಿನ ಖುರ್‌ಆನ್ ಗ್ರಂಥವನ್ನು ತೆಲುಗುದಲ್ಲಿ ಅನುವಾದಿಸಿ ಬರೆದಿದ್ದಾರೆ. ಹಾಗೆ ತೆಲುಗು ಅನುವಾದ ಗ್ರಂಥಗಳು ನನ್ನ ಹತ್ತಿರ ಏಳು ಗ್ರಂಥಗಳು ಇವೆ. ಎಲ್ಲ ಗ್ರಂಥಗಳಲ್ಲಿಯೂ

(4–103) ಆಯತ್‌ನ್ನು ನೋಡಿದರೇ ಎಲ್ಲಾ ಒಂದೇ ಅರ್ಥ ಕೊಡುವವಾಗಿ ಇವೆ. ಕೆಲವು ಗ್ರಂಥಗಳಲ್ಲಿನ ಪದಗಳು ಬೇರೆಯಾಗಿದ್ದರೂ ಅರ್ಥ ಒಂದೇ ವಿಧವಾಗಿ ಇದೆ. ಒಂದು ಗ್ರಂಥದಲ್ಲಿ ನಮಾಜ್‌ನ್ನು ಸ್ಥಾಪಿಸಿರಿ ಎಂದು ಬರೆದಿದ್ದಾರೆ. ಮತ್ತೊಂದು ಗ್ರಂಥದಲ್ಲಿ ನಮಾಜ್‌ನ್ನು ನಿರ್ಮಿಸಿರಿ ಎಂದು ಇದೆ. ಇನ್ನೊಂದರಲ್ಲಿ ನಮಾಜ್‌ನ್ನು ನೆಲೆಗೊಳಿಸಿ ಎಂದು ಇದೆ. ಮೂರು ತೆಲುಗು ಅನುವಾದ ಗ್ರಂಥಗಳಲ್ಲಿ ಬೇರೆಬೇರೆ ಪದಗಳಾಗಿ ನಿರ್ಮಿಸಿರಿ, ಸ್ಥಾಪಿಸಿರಿ, ನೆಲೆಗೊಳಿಸಿರಿ ಎಂದು ಇದ್ದರೂ ಎಲ್ಲಾ ಒಂದೇ ಅರ್ಥವನ್ನು ತೋರಿಸುತ್ತಿವೆ. ಹಾಗಿರುವಾಗ ಭಾಷೆಯನ್ನು ನೋಡದೆ ಭಾವನೆಯನ್ನು ನೋಡಬೇಕು. ಇಂತಹ ಪ್ರಶ್ನೆ ಬರುತ್ತದೇನೋಯೆಂದು ಮುನ್ಸೂಚನೆಯಾಗಿ ಒಂದೇ ಆಯತ್‌ನ್ನು ಮೂರು ಗ್ರಂಥಗಳಿಂದ ಶೇಕರಿಸಿ ಮೂರು ವಿಧಗಳ ಬರೆದು ತೋರಿಸಿದ್ದೇನೆ. ಆ ಮೂರು ಆಯತ್‌ಗಳು ಸ್ವಲ್ಪ ಪದಗಳು ಬೇರೆಯಾಗಿದ್ದರೂ ಭಾವನೆಯಲ್ಲಿ ಎಲ್ಲಾ ಒಂದೇ ವಿಧವಾಗಿ ಇವೆಯೆಂದು ಹೇಳಬಹುದು. ನಂತರ ಇಸ್ಲಾಮ್‌ನಲ್ಲಿ ಎಷ್ಟೋ ಪಂಡಿತರು ಭಕ್ತರು ಇದ್ದಾರೆ. ಆದರೇ 4–103ರಲ್ಲಿ ಹೊಸ ನಮಾಜ್‌ನ್ನು ಕೂಡಾ ಹಳೆ ನಮಾಜಾಗಿ ಅವರು ಲೆಕ್ಕಿಸಿಕೊಂಡು ಹೊಸದನ್ನು ಕೂಡಾ ಹಳೆದಾಗಿಯೇ ಹೇಳುತ್ತಿದ್ದಾರೆ. ಎಷ್ಟು ಕಡೆ ಹೇಳಿದರೂ ಇರುವುದು ಒಂದೇ ನಮಾಜ್ ಅಲ್ಲವೆ! ಎಂದು ಅನ್ನುತ್ತಿದ್ದಾರೆ ಹೊರತು ವಾಕ್ಯದಲ್ಲಿನ ಹೆಚ್ಚು ಕಡಿಮೆಗಳನ್ನು, ಸೂಕ್ಷ್ಮಾತಿ ಸೂಕ್ಷ್ಮಗಳನ್ನು ತಿಳಿಯದಂತಿದ್ದಾರೆ. ಹಾಗೆ ನಮಾಜ್ ಒಂದೇಯೆಂದು, ಅಲ್ಲಾಹ್ ಒಬ್ಬನೇಯೆಂದು ನಿರ್ಧಾರಣೆಯಲ್ಲಿ ಇರುವುದರಿಂದ ಹೊಸ ನಮಾಜ್ ಅವರಿಗೆ ತಿಳಿಯದಂತೆ ಹೋಗಿದೆ.

**ಪ್ರಶ್ನೆ :– ಇಷ್ಟು ದೊಡ್ಡ ಮುಸ್ಲಿಮ್ ಸಮಾಜದಲ್ಲಿ, ಖುರ್‌ಆನ್ ವಾಕ್ಯದಲ್ಲಿ ನಮಾಜ್ ಸ್ಥಾಪಿಸಿರಿ, ನೆಲೆಗೊಳಿಸಿರಿ ಎಂದು ಬರೆದ ಪದ ಅರ್ಥವಾಗದೆ ಹೇಳಿದ ನಮಾಜ್‌ನ್ನು ಹಳೆ ನಮಾಜ್ ಎಂದುಕೊಂಡಿದ್ದೀರ? ಒಬ್ಬರಲ್ಲದಿದ್ದರೂ ಮತ್ತೊಬ್ಬರಿಗಾದರೂ ಅದರ ಭಾವ ಅರ್ಥವಾಗಲಿಲ್ಲವಾ? ಇಸ್ಲಾಮ್ ಪಂಡಿತರಿಗಿಂತ ನೀನು ದೊಡ್ಡವನಾ, ಅವರಿಗೆ ಅರ್ಥವಾಗದಿರುವುದು ನಿನಗೆ ಅರ್ಥವಾಗಿರುವುದು ನಾವು ಹೇಗೆ**

**ನಂಬಬೇಕು? ನೀನು ಇಂದೂ ಸಮಾಜದವನು. ಹಿಂದೂ ಸಮಾಜದಲ್ಲಿನ ಮನುಷ್ಯ (ನೀವು) ಖುರಾನ್ ಗ್ರಂಥವನ್ನು ಓದಿ ಅರ್ಥ ಮಾಡಿಕೊಂಡಿರುವುದನ್ನು ಇಸ್ಲಾಮ್ ಪಂಡಿತರಿಗೆ ಅರ್ಥವಾಗಲಿಲ್ಲವೆಂದು ಹೇಳಬಲ್ಲಿರಾ?**

**ಉತ್ತರ :–** ಸತ್ಯವನ್ನು ಸತ್ಯವಾಗಿಯೇ ಹೇಳಿದರೇ ಅಲ್ಲಾಹ್ ಸಂತೋಷಪಡುತ್ತಾನೆ ಆದರೆ ಸತ್ಯವನ್ನು ಅಸತ್ಯವಾಗಿ ಹೇಳಿದರೇ ಅಲ್ಲಾಹ್ ಯಾವ ಕಾರಣಕ್ಕು ಒಪ್ಪಿಕೊಳ್ಳುವುದಿಲ್ಲ. ದೇವರು ಎಂದರೇ ನನಗೆ ಭಯವಿದೆ. ಹಾಗೆಯೇ ಭಕ್ತಿ ಇದೆ. ಸತ್ಯ ಎಂದರೂ ಕೂಡ ಭಯವಿದೆ. ದೇವರು, ದೇವರ ಬೋಧನೆಗಳು ಸತ್ಯಸಮೇತವಾಗಿ ಇರುತ್ತವೆ. ಆದ್ದರಿಂದ ಸತ್ಯವನ್ನು ಅಸತ್ಯವಾಗಿ ಹೇಳುವುದು ದೊಡ್ಡ ತಪ್ಪಾಗಿ ಭಾವಿಸುತ್ತೇನೆ. ವಾಸ್ತವವಾಗಿ ಖುರ್‌ಆನ್ ಗ್ರಂಥ ನನಗೆ ಅರ್ಥವಾಗಿರುವಂತೆ ಇತರ ಮುಸ್ಲಿಮ್‌ರಿಗೆ ಅರ್ಥವಾಗಲಿಲ್ಲವೆಂದೇ ಹೇಳುತ್ತಿದ್ದೇನೆ. ಹಿಂದೂ ನಮಾಜದಲ್ಲಿ ಹುಟ್ಟಿದವನಿಗೆ ಅರ್ಥವಾದಾಗ, ಮುಸ್ಲಿಮ್ ಸಮಾಜದಲ್ಲಿ ಹುಟ್ಟಿದವರಿಗೆ ಅರ್ಥವಾಗದಂತೆ ಹೋಗುತ್ತದಾ? ಇದು ನಂಬಬೇಕಾದ ಮಾತೇನಾಯೆಂದು ಕೇಳಬಹುದು. ಹಾಗೆ ಕೇಳುವುದರಲ್ಲಿ ತಪ್ಪಿಲ್ಲ ಆದರೆ ಸತ್ಯ ತಿಳಿದರೇ ನೀವು ಯಾರೂ ಈ ಮಾತನ್ನು ಕೇಳುವುದಿಲ್ಲ. ಎಲ್ಲರಿಗೂ ತಿಳಿಯದ ಸತ್ಯ ಏನೆಂದರೆ!

ಖುರ್‌ಆನ್ ಗ್ರಂಥದಲ್ಲಿ ಎಷ್ಟೋ ದೊಡ್ಡವಾಕ್ಯಗಳು ಇವೆ. ಈಗ ವಜ್ರವಾಕ್ಯಗಳೆನ್ನುವ ಹೆಸರಿನೊಂದಿಗೆ ಈ ಗ್ರಂಥವನ್ನು ಬರೆಯುತ್ತಿದ್ದರೂ, ವಾಸ್ತವವಾಗಿ ನೋಡಿದರೆ ವಜ್ರವಾಕ್ಯಗಳು ಎನ್ನುವ ಹೆಸರೂ ಕೂಡ ಒಂದು ವಿಧವಾಗಿ ಈ ಗ್ರಂಥಕ್ಕೆ ಕಡಿಮೆಯೇಯೆಂದು ಹೇಳಬಹುದು. ವಜ್ರಗಳಿಗಿಂತ ಹೆಚ್ಚು ಬೆಲೆಯುಳ್ಳ ವಾಕ್ಯಗಳು ಖುರ್‌ಆನ್ ಗ್ರಂಥದಲ್ಲಿ ಇವೆ. ಖುರ್‌ಆನ್ ಗ್ರಂಥ ಯಾವ ಮನುಷ್ಯನಿಗೆ ಅರ್ಥವಾಗಬೇಕೆಂದರೂ, ಮತದೊಂದಿಗೆ ಸಂಬಂಧವಿಲ್ಲದಂತೆ ಮುಸ್ಲಿಮ್‌ರಿಗಾಗಲೀ, ಹಿಂದೂಗಳಿಗಾಗಲೀ, ಕ್ರೈಸ್ಥರಿಗಾಗಲೀ ಯಾರಿಗೆ ಅರ್ಥವಾಗಬೇಕೆಂದರೂ ಉಳಿದ ಎರಡು ಗ್ರಂಥಗಳು ಓದಿದವರಿಗೇ ಅರ್ಥವಾಗುತ್ತದೆ. ಯಾರಾದರೇ ಮೂರು ದೈವಗ್ರಂಥಗಳಲ್ಲಿ ಉಳಿದ ಎರಡು

ಗ್ರಂಥಗಳು ಓದದೆ ಹೋದರೇ ಖುರ್‌ಆನ್ ಅರ್ಥವಾಗುವುದಿಲ್ಲ. ಉಳಿದ ಎರಡು ದೈವಗ್ರಂಥಗಳಾದ ಭಗವದ್ಗೀತೆ, ಬೈಬಲ್ ಓದಿ ಅರ್ಥಮಾಡಿಕೊಂಡಿದ್ದರೇ ಅವನಿಗೆ ಖುರ್‌ಆನ್ ಗ್ರಂಥ ಸುಲಭವಾಗಿ ಅರ್ಥವಾಗಬಲ್ಲದು. ನಾನು ಭಗವದ್ಗೀತೆಯನ್ನು, ಬೈಬಲ್‌ನ್ನು ವಿವರವಾಗಿ ಓದಿದ್ದೇನೆ. ಓದುವುದೇ ಅಲ್ಲದೆ ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ. ಆದ್ದರಿಂದ ಮೂರನೆ ಗ್ರಂಥವಾದ ಖುರ್‌ಆನ್ ಗ್ರಂಥ ಚೆನ್ನಾಗಿ ಅರ್ಥವಾಗುತ್ತಿದೆ. ಮುಸ್ಲಿಮ್‌ರಿಗೆ ಕೂಡಾ ತಿಳಿಯದ ರಹಸ್ಯ ಭಾವನೆಗಳು ನನಗೆ ತಿಳಿಯುತ್ತಿವೆ. ವಾಸ್ತವಕ್ಕೆ (4–103)ನೆ ವಾಕ್ಯ ಚಿಕ್ಕ ವಾಕ್ಯ. ಅದರಲ್ಲಿ ಮೂರೇ ಮಾತುಗಳು ಇವೆ. ಒಂದು ಹಳೆ ನಮಾಜ್‌ನ್ನು ಮಾಡು, ನಂತರ ಎಲ್ಲಿದ್ದರೂ ಯಾವ ಪರಿಸ್ಥಿತಿಯಲ್ಲಿದ್ದರೂ ಎಂದು ಹೇಳುತ್ತಾ ನಿಂತರೂ, ಕುಳಿತರೂ, ಮಲಗಿದರೂ ಎಂದು ಹೇಳಿದ್ದಾರೆ. ಆ ನಂತರ ಸಮಯ ಅನುಕೂಲಿಸಿದರೇ, ನಮಾಜ್‌ನ್ನು ನೆಲೆಗೊಳಿಸಿರಿ ಎಂದು ಹೇಳಿದ್ದಾನೆ. ನಮಾಜ್‌ನ್ನು ನೆಲೆಗೊಳಿಸಿರಿ ಎಂದು ಹೇಳಿರುವುದು ಎಲ್ಲ ಗ್ರಂಥಗಳಲ್ಲಿ ಇದೆ. ಎಲ್ಲರೂ ಅದನ್ನು ಓದಿದರೂ ಹಳೆ ನಮಾಜ್‌ನ್ನು ತಪ್ಪದೆ ಶ್ರದ್ಧೆಯಿಂದ ಆಚರಿಸುವುದೇ ನಮಾಜ್‌ನ್ನು ನೆಲೆಗೊಳಿಸಿದಂತೆ ತಿಳಿಯುತ್ತಿದ್ದಾರೆ. ಗ್ರಂಥದಲ್ಲಿ ನಮ್ಮ ಬುದ್ಧಿಗೆ ಹೊಸ ನಮಾಜಾಗಿ ಕಾಣಿಸುತ್ತಿದೆ. ಅದಕ್ಕೆ ಒಂದೇ ಒಂದು ಕಾರಣವಿದೆ. ಅದೇ ಅವರು ಖುರ್‌ಆನ್ ಗ್ರಂಥವನ್ನು ಅರ್ಥ ಮಾಡಿಕೊಂಡಿಲ್ಲ ವೆಂದು ಆ ಕಾರಣದಿಂದಲೇ ಹೊಸ ನಮಾಜ್ ಕೂಡಾ ಹಳೆ ನಮಾಜ್‌ನಂತೆ ಅರ್ಥವಾಗಿದೆಯೆಂದು ಹೇಳಬಹುದು. ಹಾಗೆ ಅರ್ಥವಾಗದೆ ಹೋಗುವುದಕ್ಕೆ ಮುಸ್ಲಿಮ್‌ರು ಭಗವದ್ಗೀತೆಯನ್ನು, ಬೈಬಲ್‌ನ್ನು ಓದಲಿಲ್ಲ. ಎರಡು ಗ್ರಂಥಗಳನ್ನು ಓದದೇ ಮೂರನೆ ಗ್ರಂಥ ಅರ್ಥವಾಗುವುದಿಲ್ಲವೆಂದು ನಾನು ಕೆಲವು ವರ್ಷಗಳಿಂದ ಹೇಳುತ್ತಲೇ ಇದ್ದೇನೆ.

ಭಗವದ್ಗೀತೆ (ತೌರಾತ್), ಬೈಬಲ್ (ಇಂಜೀಲ್), ಖುರ್‌ಆನ್ ಮೂರೂ ದೈವ ಗ್ರಂಥಗಳೇಯೆಂದು ಹೇಳಬಹುದು. ಒಂದು ದೈವ ಗ್ರಂಥ ಅರ್ಥ ವಾಗಬೇಕೆಂದರೇ ಉಳಿದ ಎರಡು ದೈವ ಗ್ರಂಥಗಳನ್ನು ತಪ್ಪದೆ ಓದಬೇಕಾಗಿದ್ದೇ.

ಮನುಷ್ಯ ಯಾವ ಧರ್ಮದಲ್ಲಿ ಇದ್ದರೂ ಆ ಧರ್ಮ ಅವನಿಗೆ ತಿಳಿಯಬೇಕೆಂದರೇ ಉಳಿದ ಎರಡು ಗ್ರಂಥಗಳನ್ನು ಓದಬೇಕು. ಇದು ಅಲ್ಲಾಹ್ ಐದನೆ ಸೂರಾದಲ್ಲಿ 68ನೇ ಆಯತ್‌ನಲ್ಲಿ ಹೀಗೆ ಆಜ್ಞೆ ಮಾಡಿ ಹೇಳಿದ್ದಾನೆ ನೋಡಿರಿ. ಅಲ್ಲಿ ಹೇಳಿದ ವಾಕ್ಯವನ್ನನುಸರಿಸಿ ಮನುಷ್ಯನ ಧರ್ಮ ನಿರ್ಣಯಿಸಲ್ಪಡುತ್ತದೆ.

**(5-68) "ಓ ಗ್ರಂಥವಾಹಕರೇ! ನೀವು ತೌರಾತ್, ಇಂಜೀಲನ್ನು ನಿಮ್ಮ ಪ್ರಭು ಹತ್ತಿರದಿಂದ ಬಂದಿರುವ ನಿಮ್ಮ ಹತ್ತಿರಕ್ಕೆ ಕಳುಹಿಸಲ್ಪಟ್ಟಿರುವುದನ್ನು (ಖುರಾನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದಮೇಲೂ ಇಲ್ಲದಂತೇ"**

ಈ ವಾಕ್ಯ ಖುರ್‌ಆನ್ ಗ್ರಂಥದಲ್ಲಿ ಮುಸ್ಲಿಮ್‌ರಿಗೇ ಹೇಳಿದ್ದಾರೆ ಅಲ್ಲವೆ! ಹಾಗಿರುವಾಗ ಮುಸ್ಲಿಮ್‌ರು ಭಗವದ್ಗೀತೆ, ಬೈಬಲ್ ಓದದೇ ಖುರ್‌ಆನ್ ಗ್ರಂಥದಲ್ಲಿನ ಆಯತ್‌ಗಳು ಸಕ್ರಮವಾಗಿ ಅರ್ಥವಾಗುವುದಿಲ್ಲ. ದೇವರ ನಿಯಮದ ಪ್ರಕಾರ ನಡೆದುಕೊಳ್ಳದವರಿಗೆ ಅವರ ಧರ್ಮ ಅವರಿಗೇ ತಿಳಿದಿಲ್ಲ. ಇದು ಮುಸ್ಲಿಮ್‌ರಿಗೇ ಅಲ್ಲ, ಎಲ್ಲ ಮತದವರಿಗೂ ಅನ್ವಯಿಸುತ್ತದೆ. ಆದ್ದರಿಂದ ತಮ್ಮ ಮತ ಗ್ರಂಥವೆಂದು ಒಂದು ಗ್ರಂಥವನ್ನು ಆಶ್ರಯಿಸಿ ಉಳಿದ ಎರಡು ದೈವ ಗ್ರಂಥಗಳನ್ನು ಪರಮತ ಗ್ರಂಥಗಳಾಗಿ ಅಸೂಯೆಯಿಂದ ನೋಡುವವರಿಗೆ ಎಷ್ಟು ಕಾಲಕ್ಕಾದರೂ ಅವರ ಗ್ರಂಥಗಳಲ್ಲಿನ ಜ್ಞಾನವೇ ಅರ್ಥವಾಗುವುದಿಲ್ಲ. ಈ ದಿನ ಹಿಂದೂಗಳು ಬೈಬಲ್‌ನ್ನು ಪರಮತ ಗ್ರಂಥ ಎಂದು ಅಸೂಯೆಯಿಂದ ನೋಡುತ್ತಿದ್ದಾರೆ. ಹಾಗೆಯೇ ಖುರ್‌ಆನ್ ಗ್ರಂಥವನ್ನು ಸಹ ಪರಮತ ಗ್ರಂಥ ಎಂದು ದೂರು ಇಟ್ಟಿದ್ದಾರೆ. ಅದರಲ್ಲಿ ಏನಿರುವುದು ಆ ಎರಡು ಗ್ರಂಥಗಳ ಜ್ಞಾನ ತಿಳಿದಿಲ್ಲ ಆದ್ದರಿಂದ ಅಂತಹವರಿಗೆ ಭಗವದ್ಗೀತೆ ಜ್ಞಾನ ಕೂಡಾ ತಿಳಿದಿಲ್ಲ. ಅಷ್ಟೇ ಅಲ್ಲದೆ ನಾವು ಹಿಂದೂಗಳೆಂದು ಹೇಳಿಕೊಳ್ಳುತ್ತಿದ್ದರೂ ಅವರಿಗೆ ಹಿಂದೂ ಧರ್ಮ ಯಾವುದೋ ತಿಳಿಯದಂತಿರುತ್ತದೆ. ಒಂದು ದೈವಗ್ರಂಥದಲ್ಲಿನ ಜ್ಞಾನ ಅರ್ಥವಾಗಬೇಕೆಂದರೇ ಉಳಿದ ಎರಡು ದೈವಗ್ರಂಥಗಳ ಜ್ಞಾನ ತಿಳಿದಿರಬೇಕು.

ಈ ಸೂತ್ರ ತಿಳಿಯದಿರುವುದರಿಂದ ಮುಸ್ಲಿಮ್‌ರಿಗೆ ಅವರ ಖುರ್‌ಆನ್ ಗ್ರಂಥದಲ್ಲಿ ಆಯತ್‌ಗಳು ಅರ್ಥವಾಗುತ್ತಿಲ್ಲ.

ನಾನು ಭಗವದ್ಗೀತೆ, ಬೈಬಲ್ ಎರಡು ಗ್ರಂಥಗಳು ಓದಿದ್ದೇನೆ ಆದ್ದರಿಂದ ಖುರ್‌ಆನ್ ಅರ್ಥವಾಗುತ್ತಿದೆ. ಹಾಗೆಯೇ ಖುರ್‌ಆನ್, ಬೈಬಲ್ ಓದಿರುವುದರಿಂದ ಭಗವದ್ಗೀತೆ ಅರ್ಥವಾಗುತ್ತಿದೆ. ಹಾಗೆಯೇ ಭಗವದ್ಗೀತೆ, ಖುರ್‌ಆನ್‌ನನ್ನು ಓದಿದ್ದೇನೆ ಆದ್ದರಿಂದ ನನಗೆ ಬೈಬಲ್ ಸುಲಭವಾಗಿ ಅರ್ಥವಾಗುತ್ತಿದೆ. ಮುಸ್ಲಿಮ್‌ರಿಗೆ (4–103) ರಲ್ಲಿ ಇರುವ ವಾಕ್ಯದಲ್ಲಿ ಹೊಸ ನಮಾಜ್ ಅರ್ಥವಾಗಲಿಲ್ಲವೆಂದರೇ, ಹೊಸ ನಮಾಜ್ ಇದೆಯೆಂದು ತಿಳಿದಿಲ್ಲವೆಂದರೇ ಅವರಿಗೆ ಉಳಿದ ಎರಡು ಗ್ರಂಥಗಳ ಜ್ಞಾನ ತಿಳಿದಿಲ್ಲವೆಂದೇ ಹೇಳಬಹುದು. ದೇವರು ಒಂದು ಸೂತ್ರವನ್ನು ಒಂದು ದೈವ ಗ್ರಂಥದಲ್ಲಿ ಹೇಳಿದರೇ ಮೂರು ದೈವಗ್ರಂಥಗಳಲ್ಲಿ ಆ ಸೂತ್ರ ಇದ್ದಂತೇಯಾಗುತ್ತದೆ. ಮೂರು ದೈವಗ್ರಂಥಗಳಲ್ಲಿ ಒಂದೇ ದೇವರನ್ನು ಕುರಿತು ಹೇಳಿರುವುದರಿಂದ ಒಂದು ಜ್ಞಾನ ಸೂತ್ರ ಒಂದು ದೈವ ಗ್ರಂಥದಲ್ಲಿ ಹೇಳಿದರೇ ಅದು ಉಳಿದ ಎರಡು ದೈವಗ್ರಂಥಗಳಲ್ಲಿ ಹೇಳಿದಂತೆ ಲೆಕ್ಕಿಸಬೇಕು. ಹೇಳುವುದು ಒಂದೇ ದೇವರನ್ನು ಆಗಿರುವುದರಿಂದ ಒಂದೇ ಸೂತ್ರ ಮೂರು ಗ್ರಂಥಗಳಲ್ಲಿ ಸಮಾನವಾಗಿ ಅನ್ವಯಿಸುತ್ತದೆ.

ಒಂದು ಬ್ಯಾಂಕ್ ಲಾಕರ್‌ನಲ್ಲಿ ಆಭರಣಗಳನ್ನು ಬಚ್ಚಿಟ್ಟುಕೊಂಡಾಗ, ಬ್ಯಾಂಕ್ ಲಾಕರ್‌ಗೆ ಎರಡು ಬೀಗದಕೈಗಳು ಇರುತ್ತವೆ. ಒಂದು ಖಾತಾದಾರನಿಗೆ ಕೊಟ್ಟು ಎರಡನೆಯದನ್ನು ಬ್ಯಾಂಕು ಮೇನೇಜರ್ ಅಧೀನದಲ್ಲಿ ಇಟ್ಟುಕೊಳ್ಳುತ್ತಾನೆ. ಲಾಕರ್‌ನಲ್ಲಿನ ಆಭರಣ ಬೇಕಾದಾಗ ನಿನ್ನ ಹತ್ತಿರವಿರುವ ಬೀಗದಕೈಯಿಂದ ಮಾತ್ರ ಲಾಕರ್ ತೆರೆದುಕೊಳ್ಳುವುದಿಲ್ಲ. ಬ್ಯಾಂಕ್ ಮೇನೇಜರ್ ಹತ್ತಿರವಿರುವ ಬೀಗದಕೈ ನಿನ್ನ ಹತ್ತಿರವಿರುವ ಬೀಗದಕೈ ಎರಡೂ ಉಪಯೋಗಿಸಿದಾಗ ಬ್ಯಾಂಕ್‌ಲಾಕರ್ ತೆರೆದುಕೊಂಡು ಅದರಲ್ಲಿನ ಆಭರಣ ಲಭಿಸುತ್ತದೆ. ಇಲ್ಲಿ ಬ್ಯಾಂಕ್ ಲಾಕರ್ ತೆರೆಯುವುದಕ್ಕೆ ಎರಡು ಬೀಗದ ಕೈಗಳು ಅವಶ್ಯಕವಾದಂತೆ ಒಂದು ಬೀಗದಕೈಯಿಂದ ಲಾಕರ್ ತೆರೆದುಕೊಳ್ಳದಂತೆ ಒಂದು ಗ್ರಂಥ ಓದಿದರೇ

ದೇವರ ಜ್ಞಾನ ಲಭಿಸುವುದಿಲ್ಲ. ಎರಡು ಬೀಗದಕೈಗಳು ಇರುವಾಗಲೇ ಲಾಕರ್ ತೆರೆದುಕೊಂಡಂತೆ ಯಾವಾಗಾದರೂ ಇತರೆ ಮತ ಗ್ರಂಥಗಳೆಂದು ಅಸೂಯೆ ಪಡದೆ ಓದಿದಾಗ ಗ್ರಂಥದಲ್ಲಿನ ವಾಕ್ಯದಲ್ಲಿ ಇರುವ ಜ್ಞಾನ ಲಭಿಸುತ್ತದೆ. ಈದಿನ ಎಲ್ಲಿ ನೋಡಿದರೂ ಒಂದು ಮತ ಎರಡನೆ ಮತದ ಮೇಲೆ ದ್ವೇಷ ಹೊಂದಿದೆ. ಆದ್ದರಿಂದ ಯಾರಿಗೂ ದೈವ ಗ್ರಂಥಗಳಲ್ಲಿನ ಜ್ಞಾನ ಅರ್ಥವಾಗುತ್ತಿಲ್ಲ. ದೇವರು ಎಲ್ಲ ಮತಗಳಿಗು ಒಬ್ಬನೇ ಆದಾಗ ಎಲ್ಲ ಮತಗಳಲ್ಲಿನ ಜ್ಞಾನ ಒಂದೇ ಇರುತ್ತದೆ ಅದರೆ, ಬೇರೆಯಾಗಿ ಇರುವುದಕ್ಕೆ ಅವಕಾಶವಿರುವುದಿಲ್ಲ. ಆ ವಿಷಯ ತಿಳಿಯದೆ ಪ್ರತಿಯೊಬ್ಬರೂ ಮತ ದ್ವೇಷವನ್ನು ಹೊಂದಿ ಇತರೆ ದೈವ ಗ್ರಂಥಗಳಲ್ಲಿನ ಜ್ಞಾನ ತಿಳಿಯದಿರುವುದರಿಂದ ಒಂದು ಮತದಲ್ಲಿನ ಜ್ಞಾನ ಆ ಮತದಲ್ಲಿಯೇ ಅರ್ಥವಾಗದಂತೆ ಹೋಗಿದೆ. ಮುಖ್ಯವಾಗಿ ಅದೇ ಕಾರಣದಿಂದ ವಾಕ್ಯದಲ್ಲಿ ನಮಾಜ್‌ನ್ನು ನೆಲೆಗೊಳಿಸಿರೆಂದು ಹೇಳಿದರೂ, ಅದು ಯಾವ ನಮಾಜೋ ಮುಸ್ಲಿಮ್‌ರಿಗೇ ಅರ್ಥವಾಗದಂತೆ ಹೋಗಿದೆ.

ಖುರ್‌ಆನ್ ಗ್ರಂಥದಲ್ಲಿ ಈ ಮಾತು ಇದೆ. ಆದ್ದರಿಂದ ಮುಸ್ಲಿಮ್‌ರಿಗೇ ಈ ವಿಷಯ ಚೆನ್ನಾಗಿ ಅರ್ಥ ಆಗಬೇಕಾಗಿದೆ. ಆದರೇ ಅವರು ಮಾಡುತ್ತಿರುವ ನಮಾಜ್‌ಗೆ, ಹೊಸದಾಗಿ ಸ್ಥಾಪಿಸಬೇಕಾಗಿರುವ ನಮಾಜ್‌ಗೆ ಏನು ವ್ಯತ್ಯಾಸ ಇದೆಯೆಂದು ಅವರು ಸ್ವಲ್ಪವಾದರೂ ಆಲೋಚಿಸಲಿಲ್ಲ. (4–103) ನೇ ಆಯತ್ ಖುರ್‌ಆನ್ ಗ್ರಂಥದಲ್ಲಿ ಮಾಡುತ್ತಿರುವ ನಮಾಜ್‌ನ್ನು ಕುರಿತು ಹೇಳುವುದೇ ಅಲ್ಲದೆ, ಹೊಸದಾಗಿ ನೆಲೆಗೊಳಿಸುವ ನಮಾಜ್‌ನ್ನು ಕುರಿತು ಕೂಡಾ ಹೇಳಿದ್ದಾನೆ. ಇದು ಅಲ್ಲಾಹ್‌ನಿಂದ ಬಂದಿರುವ ಜ್ಞಾನವಾದಾಗ, ಅದನ್ನೇ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಹೇಳಿದ್ದಾನೆ. ಈ ಜ್ಞಾನವನ್ನು ಸೃಷ್ಠಿ ಆರಂಭವಾದ ನಂತರ ಸ್ವಲ್ಪ ಕಾಲಕ್ಕೇ ವಾಣಿ (ಶಬ್ದ) ದಮೂಲಕ ಬಂದಿದೆ. ಆ ಶಬ್ದ ಆಕಾಶದಿಂದ ಬಂದಿದೆ. ಆ ದಿನ ಅದು ಮಾತುಗಳ ರೂಪದಲ್ಲಿ ಬರಲಿಲ್ಲ. ಆಕಾಶದಿಂದ ಹೇಗೆ ಶಬ್ದ ಬರುತ್ತದೋ ಹಾಗೆಯೇ ಗುಡುಗುಗಳ ರೂಪದಲ್ಲಿ ಬಂದಿದೆ. ಹಾಗೆ ಗುಡುಗುಗಳ ರೂಪದಲ್ಲಿ ಬಂದಿರುವ ಶಬ್ದವನ್ನು ಕೇಳಿ, ಗ್ರಹಿಸಿಕೊಂಡ

ಸೂರ್ಯನು ಸ್ವಲ್ಪಕಾಲಕ್ಕೆ ಭೂಮಿ ಮೇಲೆ 'ಮನುವು' ಎನ್ನುವ ವ್ಯಕ್ತಿಗೆ ತಾನು ಕೇಳಿದ ಶಬ್ದಗಳನ್ನು ಮನುಷ್ಯರ ಮಾತುಗಳ ರೂಪದೊಳಗೆ ಬದಲಾಯಿಸಿ ಹೇಳಿದ್ದಾನೆ. ಸೂರ್ಯನು ಯಾವ ಶಬ್ದದಲ್ಲಿನ ಭಾವನೆಯನ್ನಾಗಲೀ, ಯಾವ ಭಾಷೆಯಲ್ಲಿನ ಭಾವನೆಯನ್ನಾಗಲೀ ಗ್ರಹಿಸುವ ಶಕ್ತಿ ಇರುವವನು, ಹಾಗೆಯೇ ಯಾವ ಭಾಷೆಯಲ್ಲಾದರೂ ಮಾತನಾಡುವ ಸಾಮರ್ಥ್ಯ ಇರುವವನು. ಎಲ್ಲ ಭಾಷೆಗಳನ್ನು ಗ್ರಹಿಸುವ ಶಕ್ತಿ ಆತನಿಗೆ ಇದೆ. ಆದ್ದರಿಂದ ಕೃತಯುಗದಲ್ಲಿಯೇ ಮೊದಲ ಭಾಷೆಯಾದ ತೆಲುಗು ಭಾಷೆಯಲ್ಲಿ ಮಾತನಾಡಿ, ಮನುವಿಗೆ ಆಕಾಶವಾಣಿ ಹೇಳಿದ ಜ್ಞಾನವನ್ನು ಹೇಳುವುದು ನಡೆದಿದೆ. ಹಾಗೆಯೇ ಕಲಿಯುಗದಲ್ಲಿ 1400 ವರ್ಷಗಳ ಕೆಳಗೆ 'ಜಿಬ್ರಯೇಲ್' ಎನ್ನುವ ಹೆಸರಿನೊಂದಿಗೆ ಕೆಳಗೆ ಇಳಿದು ಬಂದು, ಮುಹಮ್ಮದ್ ಪ್ರವಕ್ತರವರಿಗೆ ಕೃತಯುಗದಲ್ಲೇ ಮನುವಿಗೆ ಹೇಳಿದ ಜ್ಞಾನವನ್ನೇ ಹೇಳುವುದು ನಡೆದಿದೆ. ಮನುವಿಗೆ ಹೇಳಿದ ಜ್ಞಾನವೇ ಕೊನೆಗೆ ಬದಲಾಗುತ್ತಾ ಬದಲಾಗುತ್ತಾ ಬಂದು ಕಲಿಯುಗ ಆರಂಭದಲ್ಲಿ ದ್ವಾಪರಯುಗದ ಕೊನೆಯಲ್ಲಿ ಅಂದರೆ ಯುಗ ಸಂಧಿಯಲ್ಲಿ ವ್ಯಾಸನಿಂದ **'ಭಗವದ್ಗೀತೆ'** ಗ್ರಂಥವಾಗಿ ಬರೆಯಲ್ಪಟ್ಟಿದೆ. ಹಾಗೆಯೇ ಅದೇ ಜ್ಞಾನವೇ 1400 ವರ್ಷಗಳ ಸಮಯದಲ್ಲಿ **'ಖುರ್‌ಆನ್'** ಗ್ರಂಥವಾಗಿ ಬರೆಯಲ್ಪಟ್ಟಿದೆ. ಇದನ್ನನುಸರಿಸಿ ಚರಿತ್ರೆ ತಿಳಿದವರಿಗೆ ಎರಡು ಗ್ರಂಥಗಳಲ್ಲಿನ ಜ್ಞಾನ ಒಂದೇಯೆಂದು ತಿಳಿಯುತ್ತಿದೆ.

ಆದ್ದರಿಂದ ಖುರ್‌ಅನ್ ಗ್ರಂಥದಲ್ಲಿ (4–103) ಆಯತ್ ಒಬ್ಬ ಮುಸ್ಲಿಮ್‌ರಿಗೇ ಅಲ್ಲದೆ ಹಿಂದೂಗಳಿಗು, ಕ್ರೈಸ್ತರಿಗು ಅನ್ವಯಿಸುವುದಾಗಿ ಇದೆ. ಇದನ್ನನುಸರಿಸಿ ನೋಡಿದರೇ ಹಿಂದೂಗಳು ಯಾವ ಆರಾಧನೆ ಮಾಡುತ್ತಿದ್ದಾರೋ ಅದಕ್ಕಿಂತ ಬೇರೆ ಆರಾಧನೆಯನ್ನು ನೆಲೆಗೊಳಿಸಬೇಕಾದ ಅವಶ್ಯವಿದೆ. ಹಾಗೆಯೇ ಕ್ರೈಸ್ಥರು ಯಾವ ಆರಾಧನೆ (ಪ್ರಾರ್ಥನೆ) ಮಾಡುತ್ತಿದ್ದಾರೋ ಅದಕ್ಕಿಂತ ಬೇರೆಯಾಗಿರುವ ಪ್ರಾರ್ಥನೆಯನ್ನು ನೆಲೆಗೊಳಿಸಬೇಕಾದ ಅವಶ್ಯವಿದೆ. ಹಾಗೆಯೇ ಮುಸ್ಲಿಮ್‌ರು ಅವರು ಮಾಡುತ್ತಿರುವ ನಮಾಜ್‌ನ್ನು ಅವರು ಮಾಡುತ್ತಾ,

ಅದನ್ನು ಅಲ್ಲವೆಂದು ಪ್ರತ್ಯೇಕವಾದ ಮತ್ತೊಂದು ನಮಾಜ್‌ನ್ನು ನೆಲೆಗೊಳಿಸಬೇಕಾದ ಅವಶ್ಯವಿದೆ. ಅಲ್ಲಿಯವರೆಗು ಮಾಡದ ಹೊಸ ನಮಾಜ್‌ನ್ನು ನೆಲೆಗೊಳಿಸಿಕೊಳ್ಳಿರೆಂದು ಹೇಳುವುದಾಗಿದೆ. ಹಾಗೆಯೇ ನೆಲೆಗೊಳಿಸಿಕೊಳ್ಳಬೇಕಾದ ಅವಶ್ಯವಿದೆ. ಅದರೇ ದೇವರು ಈ ವಿಷಯವನ್ನು ವಾಕ್ಯ ರೂಪದಲ್ಲಿ ಹೇಳಿದರೂ 'ನನಗೆ ತಿಳಿದಿರುವುದು ಇಷ್ಟೇ, ನನಗೆ ತಿಳಿಯದಿರುವುದರ ತಂಟೆಗೆ ನಾನು ಹೋಗುವುದಿಲ್ಲ' ಎಂದು ದೇವರು ಹೇಳಿದ ವಾಕ್ಯವನ್ನು ಕೂಡಾ ತಿಳಿಯದವರು, ನೋಡದವರು ಇದ್ದಾರೆ. ಅಂತಹವರಿಗೆ ನನ್ನಂತಹವನು ಯಾರಾದರೂ ವಾಕ್ಯ ಹೀಗೆ ಇದೆಯೆಂದು ತೋರಿಸಿದರೂ, ಖುರ್‌ಆನ್ ಗ್ರಂಥ ಜ್ಞಾನವನ್ನು ಕೂಡಾ ಪಕ್ಕಕ್ಕಿಟ್ಟು, ನಮ್ಮ ಹಿರಿಯರು ಹೇಳಿದಂತೆ ನಡೆದುಕೊಳ್ಳುತ್ತಿದ್ದೇವೆಂದು ಹೇಳುತ್ತಿರುವರು. ಹಿರಿಯರು ಹೇಳಿರುವುದನ್ನು ಕೇಳುವುದು ಒಳ್ಳೆಯದೇ ಆಗಿರುವಾಗ ದೇವರು ಹೇಳಿರುವುದು ಕೇಳುವುದು ಇನ್ನೂ ಒಳ್ಳೆಯದಾಗುತ್ತದೆ ಅಲ್ಲವೆ! ದೇವರಿಗಿಂತ ಹಿರಿಯರು ಕೂಡಾ ಚಿಕ್ಕವರೇಯಾಗುತ್ತಾರೆ. ದೇವರ ಮಾತಿನೊಂದಿಗೆ ಸಮಾನವಾಗಿ ಹಿರಿಯರ ಮಾತುಗಳನ್ನು ಹೋಲಿಸಿಕೊಳ್ಳಬಾರದು. ದೈವಗ್ರಂಥದಲ್ಲಿನ ವಾಕ್ಯವನ್ನು ಬಿಟ್ಟು, ಹಿರಿಯರು ಇಟ್ಟಿರುವ ಮತ ಸಾಂಪ್ರದಾಯಗಳನ್ನು ಅನುಸರಿಸಿ ಹಾಗೆಯೇ ನಡೆದುಕೊಂಡರೇ ದೇವರ ಮಾತನ್ನು ಗೌರವಿಸದವರಾಗುತ್ತೇವೆ.

**ಪ್ರಶ್ನೆ :– ನೀವು ಹೇಳಿರುವುದು ಒಳ್ಳೆಯದೆ. ಆದರೇ ಕೆಲವರು ವಿದ್ವಾಂಸರಾದ ಮುಸ್ಲಿಮ್‌ರು ಖುರ್‌ಆನ್ ಗ್ರಂಥದಲ್ಲಿನ ಪ್ರತಿ ವಾಕ್ಯವನ್ನು ತಿಳಿದ ಪಂಡಿತರಾಗಿ ಇರುತ್ತಿರುವ ಅವರು ಈ ವಿಷಯವನ್ನು ಕುರಿತು ಹೀಗೆ ಹೇಳುತ್ತಿದ್ದಾರೆ. (4–103) ನೇ ವಾಕ್ಯದಲ್ಲಿ ಹೇಳಿರುವುದು ಅರ್ಥವಾಗಬೇಕೆಂದರೇ (4–102) ನೇ ವಾಕ್ಯವನ್ನು ನೋಡಬೇಕು. ಅಲ್ಲಿ ಯುದ್ಧ ಸಮಯದಲ್ಲಿ 'ಕೆಲವರು ನಮಾಜ್ ಮಾಡಿರಿ, ಕೆಲವರು ನಮಾಜ್ ಮಾಡದಂತೆ ಶತ್ರುಗಳ ಕಡೆ ಅಪ್ರಮತ್ತವಾಗಿ ಇರಿ ಎಂದೂ, ಮೊದಲು ಕೆಲವರು ನಮಾಜ್ ಮಾಡಿದಾಗ ಕಾವಲು ಇದ್ದ ಉಳಿದವರು ನಂತರ ನಮಾಜ್ ಮಾಡಿರಿ' ಎಂದು ಹೇಳಿದಂತೆ ಇದೆ. ಹಾಗೆ ಮೊದಲು ಕೆಲವರು,**

ಎರಡನೆ ಬಾರಿ ಕೆಲವರು ನಮಾಜ್ ಮಾಡುವುದು ನಡೆಯುತ್ತಿದೆ. ನಮಾಜ್ ಮಾಡುವವನನ್ನು ಉದ್ದೇಶಿಸಿ ನಮಾಜ್‌ನ್ನು ನೆಲೆಗೊಳಿಸಿರಿ ಎಂದಿದ್ದಾರೆ. ಅಷ್ಟೇ ಹೊರತು ಎರಡನೆಯವರು ಮಾಡುವುದು ಹೊಸ ನಮಾಜ್ ಅಲ್ಲ. ಮೊದಲು ಮಾಡುವುದು, ನಂತರ ಮಾಡುವುದು ಎರಡೂ ಒಂದೇ ನಮಾಜ್ ಆಗಿ ಇದೆ. ಅದು ತಿಳಿಯದೆ ಕೆಲವರು ಎರಡನೆ ಬಾರಿ ಎರಡನೆ ಗುಂಪು ಮಾಡುವುದು ಹೊಸ ನಮಾಜ್ ಅಲ್ಲ. ಎರಡೂ ಒಂದೇ ನಮಾಜ್‌ಯೆಂದು ತಿಳಿಯಬೇಕು.

**(4-102) (ಓ ಪ್ರವಕ್ತಾ!) "ನೀನು ಅವರ ಮಧ್ಯದಲ್ಲಿರುವ ಸಮಯದಲ್ಲಿ (ಯುದ್ಧ ನಡೆಯುತ್ತಿದ್ದರೇ) ಅವರು ನಮಾಜ್ ಮಾಡುವುದಕ್ಕೆ ಸಿದ್ಧವಾದಾಗ ಅವರಲ್ಲಿ ಒಂದು ವರ್ಗ ನಿನ್ನೊಂದಿಗೆ ಸಾಯುಧರಾಗಿ ನಿಲ್ಲಬೇಕು. ಮತ್ತು ಅವರು ನಮಾಜ್ ಮಾಡಿದ ಕೂಡಲೇ ನಿಮ್ಮ ಹಿಂದಕ್ಕೆ ಹೊರಟು ಹೋಗಬೇಕು. ಅಲ್ಲಿಯವರೆಗು ನಮಾಜ್ ಮಾಡದ ಎರಡನೆ ಗುಂಪು ಬಂದು ನಿನ್ನೊಂದಿಗೆ ನಮಾಜ್ ಮಾಡಬೇಕು. ನಮಾಜ್ ಮಾಡಿ ಪಕ್ಕದಲ್ಲಿರುವವರು ಆಯುಧಗಳು ಧರಿಸಿ ಅಪ್ರಮತ್ತವಾಗಿ ಇರಬೇಕು" ಎಂದು ಇದೆ.**

ಈ ಆಯತ್ ಯುದ್ಧ ಸಮಯದಲ್ಲಿ ಕೂಡಾ ನಮಾಜ್ ಮಾಡಬೇಕೆಂದು, ಆಗ ಎಲ್ಲರೂ ಒಂದೇ ಬಾರಿ ನಮಾಜ್ ಮಾಡದೆ ಎರಡು ಗುಂಪುಗಳಾಗಿ ಸೀಳಿಹೋಗಿ ಒಂದು ಗುಂಪು ನಮಾಜ್ ಮಾಡುವಾಗ ಮತ್ತೊಂದು ಗುಂಪು ಆಯುಧಗಳು ಧರಿಸಿ ನಮಾಜ್ ಮಾಡುವವರಿಗೆ ಕಾವಲು ಇರಬೇಕೆಂದೂ, ಹಾಗೆಯೇ ಮೊದಲ ಗುಂಪು ನಮಾಜ್ ಮುಗಿದ ನಂತರ ಎರಡನೆ ಗುಂಪು ನಮಾಜ್ ಮಾಡುವಾಗ ಮೊದಲ ಗುಂಪು ಕಾವಲು ಇರಬೇಕೆಂದು ವಾಕ್ಯದಲ್ಲಿ ಹೇಳಿದ್ದಾರೆ. ಮೊದಲ ಗುಂಪು ನಮಾಜ್ ಮಾಡಿದಾಗ ನಂತರ ಎರಡನೆ ಗುಂಪು ಮಾಡುವ ನಮಾಜ್‌ನ್ನು 'ನಮಾಜ್‌ನ್ನು ನೆಲೆಗೊಳಿಸೆಂದು' ಹೇಳಿದ್ದಾರೆ. ಆದ್ದರಿಂದ ಇರುವುದು ಒಂದೇ ನಮಾಜ್, ಗುಂಪುಗಳು ಎರಡು ಇರುವುದರಿಂದ ಒಂದು ಗುಂಪು ನಮಾಜ್‌ನ್ನು ಆಚರಿಸಿದ ಕೂಡಲೇ ಎರಡನೆ ಗುಂಪನ್ನು ನಮಾಜ್

**ಮಾಡೆಂದು ಹೇಳುವುದರಲ್ಲಿ ಹಾಗೆ ಹೇಳಿದ್ದಾರೆ ಹೊರತು ಎರಡನೆ ನಮಾಜ್ ಇಲ್ಲ. ನಮಾಜ್‌ಗಳು ಒಂದೇ ಇರುತ್ತದೆ ಅದನ್ನೇ ಎಲ್ಲರೂ ಆಚರಿಸುತ್ತಿದ್ದಾರೆ. ಎರಡನೆ ಹೊಸ ನಮಾಜ್ ಇಲ್ಲವೆಂದು ಹೇಳುತ್ತಿದ್ದಾರೆ. ಪೊರಪಟ್ಟು ಎರಡನೆ ಗುಂಪನ್ನು ಮಾಡೆಂದು ಹೇಳಿರುವುದೇ ಎರಡನೆ ನಮಾಜ್ ಎಂದು ಅನ್ನುತ್ತಿದ್ದಾರೆ. ಇದಕ್ಕೆ ನೀವು ಏನನ್ನುತ್ತೀರ ಹೇಳಿರಿ?**

**ಉತ್ತರ :–** ದೇವರು (ಅಲ್ಲಾಹ್) ಅನುಗ್ರಹಿಸಿದ ಹಾಗೆ ದೈವ ಗ್ರಂಥದಲ್ಲಿನ ಜ್ಞಾನ ಅರ್ಥವಾಗುತ್ತಿರುತ್ತದೆ. ಹಾಗೆಯೇ ಇಸ್ಲಾಮ್ ಪಂಡಿತರಿಗೆ ಅರ್ಥ ವಾಗಿರಬಹುದು. ಪಂಡಿತರು ಹೇಳಿದಂತೆ ಎರಡನೆ ಗುಂಪು ನಮಾಜ್ ಮಾಡುವುದನ್ನು ವಾಕ್ಯದಲ್ಲಿ ಇರುವ ಎರಡನೆ ನಮಾಜ್ ಆಗಿ ಅರ್ಥ ಮಾಡಿಕೊಂಡಿರ ಬಹುದು. ಆದರೇ ಅಲ್ಲಾಹ್ ಮನುಷ್ಯನಿಗೆ ಕೊಟ್ಟಿರುವ ಬುದ್ಧಿಯಿಂದ ಆಲೋಚಿಸಿದರೆ ನನಗೆ ಈ ವಿಧವಾಗಿ ಅರ್ಥವಾಗುತ್ತಿದೆ. ಈ ದಿನ ಮುಸ್ಲಿಮ್ ಸಮಾಜದಲ್ಲಿ ಇರುವುದು ಒಂದೇ ಒಂದು ನಮಾಜ್. ಒಂದೇ ವಿಧವಾದ ನಮಾಜ್‌ನ್ನೇ ಮುಸ್ಲಿಮ್‌ರೆಲ್ಲರೂ ಮಾಡುತ್ತಿದ್ದಾರೆ. ಇಷ್ಟು ವರ್ಗಗಳ ಮನುಷ್ಯರು ಗುಂಪುಗಳಾಗಿ, ಎಷ್ಟು ಬಾರಿ ಮಾಡಿದರೂ ಒಂದೇ ನಮಾಜ್‌ಯೇ ಹೊರತು ಅದು ಎರಡನೆ ನಮಾಜ್‌ಆಗಿ ಇರುವುದಿಲ್ಲ. ನಮಾಜ್ ಏಳು ಆಯತ್‌ಗಳ ಪಠನದಿಂದ ಕೂಡಿಕೊಂಡಿರುತ್ತದೆ. ಏಳು ಆಯತ್‌ಗಳ ಪಠನ ಇಲ್ಲದೆ ನಮಾಜ್ ಪೂರ್ತಿಯಾಗುವುದಿಲ್ಲ. ನಮಾಜ್ ಮೊದಲು ಮಾಡಿದರೂ ಹಿಂದೆ ಮಾಡಿದರೂ, ಬೇರೆ ಬೇರೆ ಸಮಯಗಳಲ್ಲಿ ಮಾಡಿದರೂ ನಮಾಜ್ ಎನ್ನುವುದು ಒಂದೇ. ನಮಾಜ್ ಕ್ರಮಶಿಕ್ಷಣದೊಂದಿಗೆ ಕೂಡಿಕೊಂಡಿದೆ. ಸಾಮೂಹಿಕವಾಗಿಯಾದರೂ ಮಾಡಬಹುದು. ಯಾರೂ ಇಲ್ಲದ ಕಡೆ ಒಂಟಿಯಾಗಿಯಾದರೂ ಮಾಡಬಹುದು. ಹೇಗೆ ಮಾಡಿದರೂ, ಯಾವಾಗ ಮಾಡಿದರೂ ನಮಾಜ್ ಒಂದೇ ಹೊರತು ಎರಡನೆಯದು ಇಲ್ಲವೇ ಇಲ್ಲ. ಆದರೇ (4–103) ರಲ್ಲಿ ನೆರವೇರಿಸುವ ನಮಾಜ್ ಬೇರೆ, ನೆಲೆಗೊಳಿಸಲ್ಪಡುವ ನಮಾಜ್ ಬೇರೆಯಾಗಿ ಹೇಳಿದ್ದಾರೆ. ಆಚರಿಸಲ್ಪಡುವ ನಮಾಜ್‌ನ್ನು ಈ ದಿನ

ಎಲ್ಲರೂ ಆಚರಿಸುತ್ತಿದ್ದಾರೆ. ಯುದ್ಧ ಸಮಯದಲ್ಲಿ ಒಂದು ಗುಂಪು ಮೊದಲು ಮಾಡಿದ ನಮಾಜ್‌ನ್ನೇ ಎರಡನೆ ಗುಂಪು ಸಹ ಮಾಡುತ್ತಿದೆ. ಅಷ್ಟೇ ಹೊರತು ಮೊದಲ ವರ್ಗ ಒಂದು ನಮಾಜ್ ಮಾಡಿದರೇ ಎರಡನೆ ಗುಂಪು ಎರಡನೆ ವಿಧ ನಮಾಜ್‌ನ್ನು ಮಾಡಲಿಲ್ಲ. ವಾಕ್ಯದಲ್ಲಿ ಹೇಳಿದ ಸಾರಾಂಶದಲ್ಲಿ ಎಲ್ಲರೂ ಆಚರಿಸುವ ನಮಾಜ್‌ನ್ನು ಹೇಳುವುದೇ ಅಲ್ಲದೆ ಹೊಸದಾಗಿ ಸ್ಥಾಪಿಸಲ್ಪಡುವ ನಮಾಜ್‌ನ್ನು ಕುರಿತು ಹೇಳಿದ್ದಾರೆ. ಎರಡನೆ ಹೊಸ ನಮಾಜ್‌ನ್ನು ಹೊರಗೆ ಇಡುವುದರಿಂದ ಅದನ್ನು ಒಪ್ಪಿಕೊಂಡು ಕೆಲವರಿಂದ ಆಡಚಣೆಗಳು ಬರುತ್ತವೇನೋ ಯೆಂದು ತಿಳಿದು ಮೊದಲೇ ಸಮಯ ಅನುಕೂಲಿಸಿದಾಗ, ಶಾಂತಿ ಭಧ್ರತೆಗಳು ಇರುವಾಗ ಎಂದು ಹೇಳಿದ್ದಾರೆ. ಎರಡನೆ ನಮಾಜ್ ಹೊಸ ನಮಾಜ್ ಇದೆಯೆಂದರೇನೆ ಅದೇನೆಂದು ಆಲೋಚಿಸದಂತೆ ಅದನ್ನು ಕುರಿತು ವಿರುದ್ಧವಾಗಿ ಮಾತನಾಡುವವರಿರುತ್ತಾರೆ. ಆದ್ದರಿಂದ ಮೊದಲೇ ಅನುಕೂಲವಾದಾಗ ಎಂದು ಹೇಳಿದ್ದಾರೆ.

(4–102) ನೇ ವಾಕ್ಯದಲ್ಲಿರುವ ಸಮಾಚಾರದಲ್ಲಿ ಹೊಸ ನಮಾಜ್ ಇಲ್ಲವೇ ಇಲ್ಲ, ಹಳೆ ನಮಾಜ್‌ನ್ನು ಕುರಿತೇ ಹೇಳಿದ್ದಾರೆ ಹೊರತು ಎಲ್ಲರೂ ಆಚರಿಸುವ ನಮಾಜ್‌ಗಿಂತ ಬೇರೆ ನಮಾಜ್‌ನ್ನು ಕುರಿತು ಹೇಳಲಿಲ್ಲ. (4–103) ರಲ್ಲಿ ಮಾತ್ರವೇ ಹೊಸದಾಗಿ ಸ್ಥಾಪಿಸಬೇಕಾದ ನಮಾಜ್‌ನ್ನು ಕುರಿತು ಹೇಳಿದ್ದಾರೆ. ಆದರೂ ಆ ಹೊಸ ನಮಾಜ್‌ನ್ನು ಇಲ್ಲಿಯವರೆಗು ಯಾರೂ ಸ್ಥಾಪಿಸಲಿಲ್ಲ. ಹೊಸದಾಗಿ ಸ್ಥಾಪಿಸಬೇಕಾದ ನಮಾಜ್‌ನ್ನು ಕುರಿತು ಪ್ರತ್ಯೇಕವಾಗಿ ಅಲ್ಲಾಹ್ ಹೇಳಲಿಲ್ಲ. ಅಲ್ಲಾಹ್ ಪ್ರತ್ಯೇಕವಾಗಿ ಹೊಸ ನಮಾಜ್ ಹೀಗೆ ಇರುತ್ತದೆಂದು ಹೇಳಿದ್ದರೇ ಪ್ರಜೆಗಳು ಅದನ್ನು ಸ್ಥಾಪಿಸುತ್ತಿದ್ದರು, ನಂತರ ಎಲ್ಲರೂ ಆಚರಿಸುತ್ತಿದ್ದರು. ದೇವರು ಪ್ರತ್ಯೇಕವಾದ ಹೊಸ ನಮಾಜ್‌ನ್ನು ಸ್ಥಾಪಿಸಿಕೊಳ್ಳಿ ರೆಂದು ಹೇಳಿದ್ದಾನೆ ಹೊರತು, ಇದೇ ಹೊಸ ನಮಾಜ್ ಎಂದು ಮಾತ್ರ ಹೇಳಲಿಲ್ಲ. ಹಾಗೆ ಏಕೆ ಹೇಳಲಿಲ್ಲವೆಂದರೆ! ಮೊದಲು ಹೇಳಿದ ಎರಡು ದೈವಗ್ರಂಥಗಳಲ್ಲಿಯೂ ಹೊಸ ನಮಾಜ್‌ನ್ನು ಕುರಿತು ಇದೆ. ಹಾಗೆಯೇ ಕೊನೆಯ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಸಹ ಅದನ್ನು ಕುರಿತು ಇದೆ.

ಮೂರು ದೈವಗ್ರಂಥಗಳಲ್ಲಿ ಹುಡುಕಿದರೇ ಎರಡನೆ ವಿಧವಾದ ಹೊಸ ನಮಾಜ್ ಕಾಣಿಸಬಲ್ಲದು. ಹಾಗೆ ದೈವಗ್ರಂಥಗಳಲ್ಲಿ ಹುಡುಕಿದರೆ ಎರಡನೆ ನಮಾಜ್‌ನ್ನು (ಪ್ರಾರ್ಥನೆಯನ್ನು) ತಿಳಿದರೂ ಅದು ತಿಳಿದವನಿಗೊಬ್ಬನಿಗೇ ಉಪಯೋಗವಾಗುತ್ತದೆ. ಯಾವ ಮತಸ್ಥನಾದರೂ ಮೊದಲಿನಿಂದ ಅಭ್ಯಾಸವಾದ, ಮೊದಲಿನಿಂದ ತಿಳಿದ ನಮಾಜ್‌ನ್ನೇ ಆಚರಿಸುತ್ತಿದ್ದಾನೆ. ಅದು ಒಂದೇ ನಮಾಜ್ ಎಂದು ಅಂದುಕೊಳ್ಳುತ್ತಿದ್ದಾರೆ. ಗ್ರಂಥಗಳಲ್ಲಿ ನಿಕ್ಷಿಪ್ತವಾಗಿರುವ ನಮಾಜ್ ಏನೋ ಯಾರಿಗೂ ತಿಳಿದಿಲ್ಲ. ಒಂದು ವೇಳೆ ಅದನ್ನು ಯಾರಾದರೂ ವಿಶದೀಕರಿಸಿ ಇದೇ ಹೊಸ ನಮಾಜ್ ಎಂದು ಹೇಳಿದರೂ, ಅದರ ವಿಷಯವನ್ನು ಸಂಪೂರ್ಣ ವಾಗಿ ತಿಳಿದರೂ, ಅದನ್ನು ಎಲ್ಲರೂ ಮಾಡಲಾರರು. ಎರಡನೆ ನಮಾಜ್‌ನ್ನು ಕುರಿತು ತಿಳಿದರೂ, ಅದನ್ನು ಆಚರಿಸುವುದಕ್ಕೆ ಬಹಳ ಜನ ಭಾಗವಹಿಸಿದರೂ ಒಬ್ಬರು ಅಥವಾ ಇಬ್ಬರು ಆ ನಮಾಜ್‌ನ್ನು ಮಾಡುತ್ತಾರೇನೋ, ಆದರೆ ಎಲ್ಲರೂ ಆಚರಿಸಲಾರರು. ದೇವರ ಆರಾಧನೆಯನ್ನು ಯಾವುದನ್ನಾದರೂ ನಮಾಜ್‌ಯಾಗಿಯೇ ಹೇಳಬಹುದೆಂದು **"ತೌಹೀದೆ ಉಲೂಹಿಯತ್"** ಎಂದು ಮುಸ್ಲಿಮ್ ಹಿರಿಯರು ಹೇಳಿದ್ದಾರೆ. ಅಲ್ಲಾಹ್‌ವೊಂದರ ಎರಡನೆ ಹೊಸ ಆರಾಧನೆ (ನಮಾಜ್) "ತೌಹೀದೆ ಉಲೂಹಿಯತ್" ವರ್ಗಕ್ಕೂ ಸಹ ಸೇರಿರುವುದಲ್ಲ. ಅದೊಂದು ಪ್ರತ್ಯೇಕವಾದ ಆರಾಧನೆ. ಅದನ್ನು ಪ್ರಯತ್ನಿಸಿ ಮಾಡಲಾರದೆ ಬಿಟ್ಟುಹಾಕಿದವರು ಸಹ ಇದ್ದಾರೆ. ಛಲ ಇರುವ ಜ್ಞಾನ ಸಂಪನ್ನರಾದವರು ಅದನ್ನು ಸಾಧಿಸಿ ಆಚರಿಸಿದವರು ಸಹ ಇದ್ದಾರೆ. ತೌರಾತ್ (ಭಗವದ್ಗೀತೆ), ಇಂಜೀಲ್ (ಬೈಬಲ್) ಗ್ರಂಥಗಳ ಜ್ಞಾನವನ್ನು ಹೇಳಿದ ಕೃಷ್ಣನು, ಯೇಸು ಇಬ್ಬರೂ ಎರಡನೆಯ ನಮಾಜ್‌ನ್ನೇ ಆಚರಿಸಿದ್ದಾರೆ. ನಮ್ಮಂತೆ ನೀವೂ ಸಹ ಆಚರಿಸಿರೆಂದು ಕೃಷ್ಣನು ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಮೊದಲು ವಹೀಯಿಂದ ಬಂದಿರುವ ಜ್ಞಾನದಲ್ಲಿ ಎರಡನೆ ನಮಾಜ್‌ನ್ನು ಕುರಿತು ಇದೆ. ಆದ್ದರಿಂದ ಕೊನೆಯಲ್ಲಿ ಖುರ್‌ಆನ್ ಜ್ಞಾನವನ್ನು ಹೇಳಿದ ಜಿಬ್ರಯೇಲ್ ತನ್ನ ಜ್ಞಾನದಲ್ಲಿ ಎರಡನೆ ಆರಾಧನೆಯನ್ನು ಕುರಿತು ಬಹಳ ಕಡೆ ಹೇಳಿದ್ದಾನೆ. ಆದರೂ ಖುರಾನ್ ಗ್ರಂಥದಲ್ಲಿ ಎರಡನೆ ನಮಾಜ್ ವಿವರ ಇದೆಯೆಂದು ಮುಸ್ಲಿಮ್‌ರಿಗೆ ತಿಳಿಯದಂತೆ

ಹೋಗಿದೆ. ಆದ್ದರಿಂದ (4–103) ರಲ್ಲಿ ಪ್ರತ್ಯೇಕವಾಗಿ ನಮಾಜ್‌ನ್ನು ನೆಲೆಗೊಳಿಸಿರಿ ಎಂದು ಹೇಳಿದ್ದಾನೆ. ಆದರೂ ಆ ಆಯತ್‌ನ್ನು ಮುಸ್ಲಿಮ್‌ರು ನೋಡಿ ಆರಾಧನೆ ಎಂದರೆ ಒಂದೇ ಎಂದು, ಪ್ರಾರ್ಥನೆ (ನಮಾಜ್) ತಾವು ಮಾಡುವುದೇ ಎಂದು ಅಂದುಕೊಳ್ಳುತ್ತಿದ್ದಾರೆ.

**ಪ್ರ :– ನೀವು ಹೇಳುವುದು ಸ್ವಲ್ಪ ಸತ್ಯವೇ ಎನಿಸಿದರೂ ಒಂದು ಕಡೆ ಸತ್ಯ ಅಲ್ಲ ಎನಿಸುತ್ತಿದೆ. ನೀವು ಸತ್ಯವನ್ನು ಹೇಳಬೇಕೆಂದು ತಾಪತ್ರಯಪಡುತ್ತಾ ಹೇಳುತ್ತಿರುವ ವಿಧಾನವನ್ನನುಸರಿಸಿ ನೀವು ಹೇಳುವುದು ಸತ್ಯವೇ ಎನಿಸಿದರೂ ಇನ್ನೂ ನಮಗೆ ಆತಂಕವಾಗಿ ಕಾಣಿಸುವ ಕೆಲವು ವಾಕ್ಯಗಳನ್ನನುಸರಿಸಿ ಇದಕ್ಕೇನನ್ನುತ್ತೀರ ಎಂದು ಕೇಳಬೇಕಾಗಿದೆ. ಇನ್ನೊಂದು ಕಡೆ ಸಹ ನಮಾಜ್ ಸ್ಥಾಪಿಸಿರಿ ಎನ್ನುವ ಪದದಿಂದಲೇ ಹೇಳಿದ್ದಾರೆ. ಆ ವಾಕ್ಯವನ್ನನುಸರಿಸಿ ನಾವು ಏನೆಂದುಕೊಳ್ಳಬೇಕೋ ನೀವೇ ಹೇಳಿರಿ.**

**(17-78) "ನಮಾಜ್‌ನ್ನು ನೆಲೆಗೊಳಿಸು, ಸೂರ್ಯನು ನೆತ್ತಿಯಿಂದ ವಾಲಿದಾಗಿನಿಂದ ರಾತ್ರಿ ಕತ್ತಲು ಆವರಿಸುವ ತನಕ"** ಎಂದು ಹೇಳಲ್ಪಟ್ಟಿದೆ. ಇದನ್ನನುಸರಿಸಿ ನಮಾಜ್‌ನ್ನು ಮಾಡುತ್ತಲೇ ಇರು ಎಂದು ಇದೆ ಅಲ್ಲವೆ! ಈ ವಾಕ್ಯದಲ್ಲಿ ಹೇಳಿರುವುದು ಒಂದೇ ನಮಾಜ್ ಅಲ್ವಾ! ಎರಡನೆ ನಮಾಜ್ ಹೆಸರು ಇಲ್ಲ ಅಲ್ಲವೆ! (4–103) ರಲ್ಲಿ ಹೇಳಿದಂತೆ ನಮಾಜ್‌ನ್ನು ನೆಲೆಗೊಳಿಸಿರೆಂದು ಮೊದಲೇ ಹೇಳಿದ್ದಾರೆ. ಇದನ್ನು ನೋಡಿದ ನಂತರ ನಿಮಗೆ ಏನನಿಸುತ್ತದೆ? ಇಲ್ಲಿ ಯಾವ ನಮಾಜ್‌ನ್ನು ಕುರಿತು ಹೇಳಿದ್ದಾರೆ? ಎನ್ನುವ ಪ್ರಶ್ನೆಗಳು ಬರುತ್ತಿವೆ. ಇದಕ್ಕೆ ನೀವೇನನ್ನುತ್ತೀರ?

**ಉತ್ತರ :–** ನಿಮ್ಮನ್ನು ತಪ್ಪುದಾರಿ ಹಿಡಿಸಬೇಕೆನ್ನುವುದು ನನ್ನ ಉದ್ದೇಶವಲ್ಲ. ಸತ್ಯವನ್ನು ಹೇಳಬೇಕೆನ್ನುವುದೇ ನನ್ನ ಉದ್ದೇಶ. ಅದರ ಪ್ರಕಾರ ಹೇಳುತ್ತಿದ್ದೇನೆ. ಮೇಲಾಗಿ ಒಂದು ಆಯತ್‌ಗೆ ತಪ್ಪು ವಿವರ ಹೇಳಿದರೇ ಘೋರವಾದ ಪಾಪಬರುತ್ತದೆಂದು ಸೂರಾ 41, ಆಯತ್ 40ರಲ್ಲಿ ಇದೆ.

**(41-40) "ನಮ್ಮ ವಾಕ್ಯಗಳ ವಿಷಯದಲ್ಲಿ ವಕ್ರವೈಖರಿಯನ್ನು ಅವಲಂಭಿಸಿ ಅಸತ್ಯಗಳನ್ನು ಹೊಂದಿಸಿ ಹೇಳುವವರನ್ನು ನಾವು ನೋಡುತ್ತಲೇ ಇದ್ದೇವೆ. ಅಗ್ನಿಯಲ್ಲಿ ಬೀಳಿಸುವವನು ಮೇಲಾ? ಇಲ್ಲವೆ ಪ್ರಳಯ ದಿನದಂದು ಸುರಕ್ಷಿತವಾಗಿ ಪ್ರಶಾಂತ ಸ್ಥಿತಿಯಲ್ಲಿ ಬರುವವನು ಮೇಲಾ? ನೀವು ಇಷ್ಟ ಬಂದಿರುವುದನ್ನು ಮಾಡಿಕೊಳ್ಳುತ್ತಾ ಹೋಗಿ. ಆತನು (ಅಲ್ಲಾಹ್) ನೀವು ಮಾಡುವ ಕೆಲಸಗಳೆಲ್ಲವೂ ನೋಡುತ್ತಲೇ ಇದ್ದಾನೆ."**

ಆಯತ್‌ನಲ್ಲಿ ದೇವರ ವಾಕ್ಯಕ್ಕೆ ತಪ್ಪು ಭಾವನೆಯನ್ನು ಬರೆದರೆ ಮರಣಾಂತರ ಅಗ್ನಿಯಲ್ಲಿ ಬೀಳಿಸಲ್ಪಡುತ್ತೀರ ಎಂದು ಹೇಳಿದ ನಂತರ ಸಹ ಯಾರೂ ಆಯತ್‌ಗಳ ತಂಟೆಗೆ ಹೋಗುವುದಿಲ್ಲ. ಸತ್ಯ ತಿಳಿದಿದ್ದರೇ ಹೊರಗೆ ಹೇಳುತ್ತಾರೆ ಆದರೆ ವಾಕ್ಯವನ್ನು ಕುರಿತು ತಿಳಿಯದಿದ್ದರೇ ಸುಮ್ಮನೆ ಇರುತ್ತಾರೆ. ನನಗೆ ಸತ್ಯ ತಿಳಿದಿದೆ ಆದ್ದರಿಂದ ಧೈರ್ಯವಾಗಿ ಹೊರಗೆ ಹೇಳುತ್ತಿದ್ದೇನೆ. ಬುದ್ಧಿಯನ್ನನುಸರಿಸಿ ಯೋಚಿಸುವವರಿಗೆ ನನ್ನ ಮಾತುಗಳಲ್ಲಿನ ಸತ್ಯ ತಿಳಿಯಬಲ್ಲದು. ಈಗ ನೀವು (17–78) ನೇ ಆಯತ್‌ನಲ್ಲಿನ ವಾಕ್ಯವನ್ನು ಹೇಳಿದ್ದೀರ. ಇಲ್ಲಿ ನಮಾಜ್‌ನ್ನು ನೆಲೆಗೊಳಿಸೆಂದು ಹೇಳಿದ್ದಾರೆ. ಆದ್ದರಿಂದ ಹೊಸ ನಮಾಜ್‌ನ್ನು ಕುರಿತು ಹೇಳಿದ್ದಾರೆಂದು ತಿಳಿಯುತ್ತಿದೆ. ತಲೆಯ ಮೇಲೆ ಸೂರ್ಯನು ಇಳಿಮುಖ ಆರಂಭವಾದಾಗಿನಿಂದ ರಾತ್ರಿ ಕತ್ತಲು ಆವರಿಸುವವರೆಗು ಹೊಸ ನಮಾಜ್‌ನ್ನು ಬಿಡದಂತೆ ಮಾಡಬಹುದು. ಅದೇ ಹಳೆ ನಮಾಜ್ ಆದರೆ ನಿರ್ಣಯವಾದ ಕಾಲದಲ್ಲಿ ಕ್ರಮಶಿಕ್ಷಣೆಯಾಗಿ ಸಾಮೂಹಿಕವಾಗಿ ನಮಾಜ್ ಮಾಡಬೇಕಾಗಿರುತ್ತದೆ. ಹೊಸ ನಮಾಜ್‌ಗೆ ನಿಯಮಗಳು ಇಲ್ಲ. ಮಧ್ಯಾಹ್ನದಿಂದ ರಾತ್ರಿವರೆಗು ಏಕಧಾಟಿಯಾಗಿ ಮಾಡುವ ನಮಾಜ್ ಹೊಸದಾದಾಗ, ಹಳೆ ನಮಾಜ್ ಏಕಧಾಟಿಯಾಗಿ ಮಾಡುವುದಲ್ಲ. ಇದನ್ನನುಸರಿಸಿ (17–78) ಆಯತ್‌ನಲ್ಲಿ ಹೊಸ ನಮಾಜ್‌ನ್ನು ಕುರಿತು ಹೇಳಿದ್ದಾರೆ ಆದರೆ ಹೇಳೆ ನಮಾಜ್‌ನ್ನು ಹೇಳಲಿಲ್ಲವೆಂದು ತಿಳಿಯುತ್ತಿದೆ. ಹಳೆ ನಮಾಜ್ ನಿಯಮಗಳಿಂದ ಕೂಡಿಕೊಂಡಿದೆಯೆಂದು, ಏಕಧಾಟಿಯಾಗಿ ಮಾಡುವುದು ಅಲ್ಲವೆಂದು

ಮುಸ್ಲಿಮ್‌ರೆಲ್ಲರಿಗೂ ತಿಳಿದಿದೆ. ಹಳೆ ನಮಾಜ್‌ನ್ನು ಕುರಿತು ಎಲ್ಲರಿಗೂ ತಿಳಿದಿದೆ, ಹೊಸ ನಮಾಜ್‌ನ್ನು ಕುರಿತು ಯಾರಿಗೂ ತಿಳಿದಿಲ್ಲ. ನಾವು ಹೇಳುತ್ತಿದ್ದರೇ, ಈಗಲೇ ಮೊದಲಬಾರಿ ಹೊಸ ನಮಾಜ್ ಎನ್ನುವ ಹೆಸರನ್ನು ಕೇಳುತ್ತಿರುತ್ತಾರೆ. ಈಗಲಾದರೂ ಗ್ರಂಥದಲ್ಲಿ ಹೇಳಿದ ಹೊಸ ನಮಾಜ್‌ನ್ನು ಕುರಿತು ತಿಳಿಯ ಬಹುದಲ್ಲವೆ! ಮೂರು ದೈವಗ್ರಂಥಗಳಲ್ಲಿ ನಮಗೆ ತಿಳಿಯದ ಹೊಸ ನಮಾಜ್‌ನ್ನು ಕುರಿತು ಮುಖ್ಯವಾಗಿ ಹೇಳಿದ್ದಾರೆ. ಮನುಷ್ಯನಿಗೆ ಬೋಧಿಸಿದ ಜ್ಞಾನದಲ್ಲಿ ಪ್ರಧಾನವಾಗಿ ಹೊಸ ನಮಾಜ್‌ನ್ನು ಕುರಿತೇ ಇದೆ. ಹಾಗಿರುವಾಗ ಹೊಸ ನಮಾಜ್‌ನ್ನು ಕುರಿತು ಎಲ್ಲರೂ ತಿಳಿದು ಗ್ರಂಥದಲ್ಲಿ ಹೇಳಿದಂತೆ ಏಕಧಾಟಿಯಾಗಿ ನಮಾಜ್‌ನ್ನು ಮಾಡಬಹುದಲ್ಲವೆ!

ಮೂರು ದೈವಗ್ರಂಥಗಳಲ್ಲಿ ಹೊಸ ನಮಾಜ್‌ನ್ನು ಕುರಿತು ಇರುವುದು ವಾಸ್ತವವೇ ಎಂದು ಅದನ್ನು ಕುರಿತು ತಿಳಿದ ನಾವು ಹೇಳುತ್ತಿದ್ದೇವೆ. ಇನ್ನೂ ವಿವರವಾಗಿ ಹೇಳಿದರೇ ಪ್ರಥಮ ದೈವ ಗ್ರಂಥ ಭಗವದ್ಗೀತೆಯಲ್ಲಿ ಹೊಸ ನಮಾಜ್‌ನ್ನು ಕುರಿತು ಹೆಚ್ಚಿನ ಭಾಗದಲ್ಲಿ ಹೇಳಲ್ಪಟ್ಟಿದೆ. ದ್ವಿತೀಯ ದೈವ ಗ್ರಂಥವಾದ ಬೈಬಲ್‌ನಲ್ಲಿ ಭಗವದ್ಗೀತೆಯಲ್ಲಿ ಹೇಳಿರುವುದಕ್ಕಿಂತ ಸ್ವಲ್ಪ ಕಡಿಮೆ ಹೇಳಿದ್ದಾರೆ. ಅಂತಿಮ ದೈವ ಗ್ರಂಥ ಖುರ್‌ಆನ್ ಗ್ರಂಥದಲ್ಲಿ ದ್ವಿತೀಯ ದೈವ ಗ್ರಂಥಕ್ಕಿಂತ ಕಡಿಮೆ ಹೇಳಿದ್ದಾರೆ. ತೌರಾತ್ ಗ್ರಂಥದಲ್ಲಿ ಸುಮಾರು ಶೇ. **60** ರಷ್ಟು ಹೊಸ ನಮಾಜ್‌ನ್ನು ಕುರಿತು ಹೇಳಿದಾಗ, ಇಂಜೀಲ್ ಗ್ರಂಥದಲ್ಲಿ ಶೇ. **30** ರಷ್ಟು ಹೇಳಿದ್ದಾರೆ. ಖುರ್‌ಆನ್ ಗ್ರಂಥದಲ್ಲಿ ಶೇ. **15** ರಷ್ಟು ಹೇಳಿದ್ದಾರೆ. ಮೂರು ದೈವ ಗ್ರಂಥಗಳಲ್ಲಿ ಇಷ್ಟು ಭಾಗ ಹೇಳಿದ್ದಾರೆಂದು ಅಳತೆ ಮಾಡಿ ನಾವು ಹೇಳುತ್ತಿದ್ದೇವೆಂದರೇ ಅದು ಯಾವುದೋ ಗ್ರಂಥದಲ್ಲಿ ಇದ್ದರೂ ಓದಿದವರಿಗೆ ಅರ್ಥವಾಗಲಿಲ್ಲವೆಂದೇ ತಿಳಿಯುತ್ತಿದೆ. ನಮಗೆ ತಿಳಿದಿರುವುದು ನಿಮಗು ಕೂಡಾ ತಿಳಿಯಬಲ್ಲದು. ನಿಮಗೆ ತಿಳಿದಿರುವುದರವರೆಗೇ ಗೋಡೆ ಕಟ್ಟಿಕೊಂಡು ಇಷ್ಟೇ ಇದೆ ಎಂದುಕೊಳ್ಳಬಾರದು. ದೈವ ಗ್ರಂಥಗಳಲ್ಲಿ ನಮಗೆ ತಿಳಿಯದಿರುವುದು ಎಷ್ಟೋ ಇದೆ. ಆದ್ದರಿಂದ ಬುದ್ಧಿಯನ್ನು ಉಪಯೋಗಿಸಿ ಪ್ರತಿ ವಾಕ್ಯವನ್ನು ನೋಡಬೇಕೆಂದು ತಿಳಿಸುತ್ತಿದ್ದೇವೆ.

**ಪ್ರಶ್ನೆ :– ಮೂರು ದೈವ ಗ್ರಂಥಗಳಲ್ಲಿ ಹೊಸ ನಮಾಜ್‌ನ್ನು ಕುರಿತು ಹೇಳಿದ್ದಾರೆಂದು ನೀವು ತಿಳಿಸುತ್ತಿರುವಾಗ ನಾವು ಕೇಳುತ್ತಿದ್ದೇವೆ. ನಮಗೆ ಏಕೆ ತಿಳಿದಿಲ್ಲವೋ, ನಿಮಗೆ ಏಕೆ ತಿಳಿದಿದೆಯೋ? ನಿಮಗೆ ತಿಳಿದಿದೆಯಲ್ಲವೆ! ಈಗಲಾದರೂ ಎಲ್ಲರಿಗೂ ಆ ನಮಾಜ್‌ನ್ನು ಕುರಿತು ನೀವು ತಿಳಿಸಬಹುದಲ್ಲವೆ! ಇಲ್ಲಿಯವರೆಗು ನೀವು ಆ ಹೊಸ ನಮಾಜ್ ಹೀಗೆ ಮಾಡಬೇಕೆಂದು ಹೇಳಲಿಲ್ಲ. ಈಗಲಾದರೂ ಆ ಹೊಸ ನಮಾಜ್‌ನ್ನು ಹೇಗೆ ನೆಲೆಗೊಳಿಸಬೇಕೋ? ಹೇಗೆ ಆಚರಿಸಬೇಕೋ ಹೇಳಬೇಕೆಂದು ಕೇಳುತ್ತಿದ್ದೇವೆ. ದಯೆಮಾಡಿ ನಿಮಗೆ ತಿಳಿದಿರುವುದೆಲ್ಲಾ ನಮಗೆ ತಿಳಿಸಿರಿ.**

**ಉತ್ತರ :–** ನನಗೆ ತಿಳಿದಿರುವುದು ನಾನು ಹೇಳಬಲ್ಲೆನು. ಆದರೇ ಗ್ರಂಥದಲ್ಲಿ ಎಷ್ಟೋ ಕಡೆ ಇರುವುದನ್ನು ಯಾರಷ್ಟಕ್ಕವರು ತಿಳಿದುಕೊಂಡು ಆಚರಿಸಿದಾಗ ಅದಕ್ಕೆ ಬೆಲೆ ಇರುತ್ತದೆ. ನಮಾಜ್ ಎನ್ನುವ ಹೆಸರಿಗೆ ಸಾರ್ಥಕ ಕೈಗೂಡುತ್ತದೆ. ಹೊಸ ಪ್ರಾರ್ಥನೆ ಇಲ್ಲವೆ ನಮಾಜ್‌ನಿಂದ ಮನುಷ್ಯ ಪರಲೋಕವನ್ನು ಸೇರುವ ಭಾಗ್ಯ ಉಂಟಾಗುತ್ತದೆ. **"ನನಗೆ ಜನ್ಮ ಬೇಡ"** ಎನ್ನುವ ಅರ್ಥವನ್ನು ನಮಾಜ್ ಎನ್ನುವ ಮೂರು ಅಕ್ಷರಗಳು ತಿಳಿಸುತ್ತಿವೆ. ಒಂದು ಸಮಯದಲ್ಲಿ ಕೃತಯುಗ ದಲ್ಲಿಯೇ ನಮಾಜ್ ಎನ್ನುವುದು ಸ್ವಚ್ಛವಾದ ತೆಲುಗು ಪದವಾಗಿ ಇರುತ್ತಿತ್ತೆಂದು ಮೊದಲೇ ಹೇಳಿಕೊಂಡಿದ್ದೇವೆ. ಅದರ ಅರ್ಥ ತೆಲುಗುದಲ್ಲಿ **ನ** ಎಂದರೆ ಬೇಡ, **ಮ** ಎಂದರೆ ನನಗೆ, ಜ್ ಎಂದರೆ ಜನ್ಮಗಳು 'ನನಗೆ ಜನ್ಮಗಳು ಬೇಡ' ಎನ್ನುವ ಮಾತನ್ನು ಕಡಿತಗೊಳಿಸಿದ ಅಕ್ಷರಗಳಲ್ಲಿ ನಮಾಜ್ ಎಂದು ಕರೆದ್ದಾರೆ. ಹೊಸ ನಮಾಜ್ (ಆರಾಧನೆ) ಆದರೆ ಅದರ ಅರ್ಥಕ್ಕೆ ಸರಿಹೋಗುವುದಾಗಿ ಇದೆ. ಅಹರ್ನಿಶೆಗಳು ಮಾಡುವುದು ಒಂದೇ ಒಂದು ಆರಾಧನೆ ಇದೆ. ಅದೇ ಹೊಸ ನಮಾಜ್. ನಿನಗೆ ಹೊಸ ನಮಾಜ್ ಎಂದು ಹೇಳುತ್ತಿದ್ದರೂ ನನಗೆ ಮಾತ್ರ ಅಭ್ಯಾಸವಾದ ಕೆಲಸವಾಗಿ ಇದೆ. ಎಲ್ಲರಿಗೂ ತಿಳಿದ ಹಳೆ ನಮಾಜ್ ದೇವರ ಮೇಲೆ ವಿಶ್ವಾಸವಿರುವವರು ಅಂದರೆ ಮುಸ್ಲಿಮ್‌ರು ಅದೊಂದು ಕೆಲಸವಾಗಿ ಮಾಡುತ್ತಿದ್ದಾರೆ. ಆದರೇ ಎಲ್ಲರ ದೃಷ್ಟಿಯಲ್ಲಿ ಹೊಸ ನಮಾಜ್‌ಆಗಿ ಗ್ರಂಥದಲ್ಲಿ ಹೇಳಲ್ಪಟ್ಟಿರುವುದು ಪ್ರತ್ಯೇಕಿಸಿ ಮಾಡುವ ಕಾರ್ಯವೂ ಸಹ ಅಲ್ಲ.

ಎಲ್ಲರಿಗೂ ಅರ್ಥವಾಗುವುದಕ್ಕೆ ನಾನು ಹೊಸ ನಮಾಜ್‌ನ್ನು ಮಾಡುತ್ತಿದ್ದೇನೆ ಎಂದು ಹೇಳಿದರೂ ಅದು ನಾನು ಮಾಡುವುದಲ್ಲ. ಅದು ಎಲ್ಲರಲ್ಲಿ ನಡೆಯುತ್ತಿದೆ. ನನ್ನಲ್ಲಿ ಸಹ ನಡೆಯುತ್ತಿದೆ. ನಡೆಯುತ್ತಿರುವ ಅದರ ಮೇಲೆ ಧ್ಯಾಸವನ್ನಿಟ್ಟು ಕೊಂಡಿದ್ದೇನೆ. ಆದ್ದರಿಂದ ಅದು ನಾನು ಮಾಡಿದಂತಾಗುತ್ತಿದೆ. ಅಷ್ಟೇ ಹೊರತು ಹೊಸ ನಮಾಜ್‌ನ್ನು ಪ್ರತ್ಯೇಕಿಸಿ ಹಳೆ ನಮಾಜ್ ಹಾಗೆ ಮಾಡುವುದು ಅಲ್ಲ. ಯಾರಿಗೆ ತಿಳಿದಿರುವುದು ಅವರು ಮಾಡುವುದು ಎಂದು ಹೇಳಬಹುದು ಆದರೆ ಪ್ರತ್ಯೇಕವಾಗಿ ಮಾಡುವುದು ಅಲ್ಲ ಆದ್ದರಿಂದ ಸಾಮೂಹಿಕವಾಗಿ ಮಾಡಲಾರೆವು. ನಿಯಮಿತ ಕಾಲದಲ್ಲಿ ಎನ್ನುವುದೇ ಇರುವುದಿಲ್ಲ. ಹೊರಗೆ ಕಾಣಿಸುವುದು ಅಲ್ಲ. ಹಳೆ ನಮಾಜ್ ಹೊರಗೆ ತಿಳಿಯುತ್ತದೆ. ಹಳೆ ನಮಾಜ್‌ನ್ನು ಮಾಡುವವರನ್ನು ನೋಡಬಹುದು. ಹೊಸ ನಮಾಜ್‌ನ್ನು ಮಾಡುವವರು ಪಕ್ಕದಲ್ಲೇ ಇದ್ದರೂ ಅವರನ್ನು ಕುರಿತು ನಮಗೆ ತಿಳಿದಿಲ್ಲ.

ಬಹಳ ಜನ ಮುಸ್ಲಿಮ್ ಹಿರಿಯರು ಎಲ್ಲರೂ ಮಾಡುವ ನಮಾಜ್‌ನ್ನು ಕಡಿತಗೊಳಿಸಿದ ನಮಾಜ್ ಎನ್ನುತ್ತಿರುತ್ತಾರೆ. ಭಯದಿಂದ ನಿಯಮದಿಂದ ಮಾಡುವ ನಮಾಜ್‌ನ್ನು ಕಟ್ಟಿಹಾಕಲ್ಪಟ್ಟಿರುವ ನಮಾಜ್, ಕಡಿತಗೊಳಿಸಿದ ನಮಾಜ್ ಎಂದು ಹೇಳುತ್ತಿರುತ್ತಾರೆ. ಹೊಸದಾಗಿ ನೆಲಗೊಳಿಸೆಂದು ಹೇಳಿದ ನಮಾಜ್ ಕಡಿತಗೊಳಿಸಿದ ನಮಾಜ್ ಅಲ್ಲ. ಇಷ್ಟೇ ಸಮಯದಲ್ಲಿ ಹೀಗೇ ಮಾಡಬೇಕೆನ್ನುವ ನಿಯಮವಿಲ್ಲ. ಆದ್ದರಿಂದ ಎಲ್ಲರೂ ಪ್ರತಿ ದಿನ ಮಾಡುವ ನಮಾಜ್‌ಗಿಂತ ಪ್ರತ್ಯೇಕವಾದುದು. ನಿತ್ಯ ಎಲ್ಲರೂ ಒಂದು ಕಡೆ ಒಗ್ಗಟ್ಟಾಗಿ ಮಾಡುವ ನಮಾಜ್ ಏಳು ಆಯತ್‌ಗಳ ಪಠನದಿಂದ ಕೂಡಿಕೊಂಡಿರುತ್ತದೆ. ಉಳಿದ ಮತಗಳಲ್ಲಿ ಸಹ ಯಾವುವೋ ಮಾತುಗಳೊಂದಿಗೆ ಅಥವಾ ಮಂತ್ರಗಳೊಂದಿಗೆ ಅವರ ಆರಾಧನೆಗಳು ಕೂಡಿಕೊಂಡಿರುತ್ತವೆ. ಕ್ರೈಸ್ತರ ಆರಾಧನ ಮಾತುಗಳಿಂದಲೋ, ಹಿಂದೂಗಳ ಆರಾಧನೆ ಮಂತ್ರಗಳಿಂದಲೋ ಕೂಡಿಕೊಂಡಂತೆ ಮುಸ್ಲಿಮ್‌ರ ಆರಾಧನೆ (ನಮಾಜ್) ಏಳು ವಾಕ್ಯಗಳ ಪಠನದಿಂದ ಕೂಡಿಕೊಂಡಿರುತ್ತದೆ. ಆ ಏಳು ಆಯತ್‌ಗಳಲ್ಲಿ ಮೊದಲ ನಾಲ್ಕು ಅಲ್ಲಾಹ್‌ನ್ನು ಹೊಗಳುವಂತಹವು,

ನಂತರ ಮೂರು ಅರ್ಥಿಸುವವಾಗಿ ಇವೆ. ದೇವರ ಆರಾಧನೆಯಲ್ಲಿ ಈ ಎರಡು ವಿಧಾನಗಳು ಎಲ್ಲ ಮತಗಳಲ್ಲಿ ಇವೆ. ಹೊಗಳುವುದು, ಕೇಳಿಕೊಳ್ಳುವುದು ದೇವರ ಹತ್ತಿರವೇ ಅಲ್ಲದೆ ಪ್ರಪಂಚ ವ್ಯವಹಾರಗಳಲ್ಲಿ ಸಹ ಇದೆ. ಪ್ರಪಂಚ ವ್ಯವಹಾರಗಳಲ್ಲಿ ಸಹ ಒಬ್ಬನನ್ನು ಮೊದಲು ಹೊಗಳಿ ನಂತರ ಕೇಳಿದರೆ ಅವನು ಏನಾದರೂ ಕೊಡಬಲ್ಲನು. ಹೊಗಳದಂತೆ ಕೇಳಿದರೆ ಯಾರೂ ಏನೂ ಕೊಡುವುದಿಲ್ಲ. ಅದೇ ಸೂತ್ರವನ್ನೇ ಎಲ್ಲರೂ ದೇವರ ವಿಷಯದಲ್ಲಿ ಸಹ ಉಪಯೋಗಿಸಿದ್ದಾರೆ. ಮೊದಲು ಪ್ರಸನ್ನತೆಗಾಗಿ ಹೊಗಳುವುದು ನಂತರ ಲಬ್ಧಿಗೋಸ್ಕರ ಅರ್ಥಿಸುವುದು ನಡೆಯುತ್ತಿದೆ. ಪ್ರಪಂಚದಲ್ಲಿ ಉಪಯೋಗಿಸುವ ವಿಧಾನವನ್ನು ದೇವರ ವಿಷಯದಲ್ಲಿ ಉಪಯೋಗಿಸುವುದು ದೇವರಿಗೆ ಇಷ್ಟವಿಲ್ಲ. ಅದರಿಂದ ಮನುಷ್ಯರನ್ನು, ದೇವರನ್ನು ಸಮಾನ ಮಾಡಿದಂತಾಗುತ್ತದೆ.

ಆದರೇ ಮನುಷ್ಯರಿಗೆ ತಿಳಿದ ವಿಧಾನ ಒಂದೇ ಆದಾಗ ಅದೇ ವಿಧಾನದ ಪ್ರಕಾರ ದೇವರ ಆರಾಧನಾ ವಿಷಯದಲ್ಲಿ ಮೊದಲು ಹೊಗಳುವುದು ನಂತರ ಕೇಳುವುದು ಎನ್ನುವ ಎರಡು ಪದ್ಧತಿಗಳು ಇರುವುದನ್ನೇ ಆಚರಿಸುತ್ತಿದ್ದಾರೆ. ಈ ವಿಧಾನ ಒಂದು ಮತಕ್ಕೇ ಅಲ್ಲದೆ ಮನುಷ್ಯರಿರುವ ಪ್ರತಿ ಮತದಲ್ಲಿ ಇದೆ. ಒಬ್ಬ ಮನುಷ್ಯನಿಂದ ಲಾಭವನ್ನು ಹೊಂದಬೇಕಾದಾಗ ಅವನನ್ನು ಹೊಗಳಿದರೆ ಅವನು ಪ್ರಸನ್ನನಾಗುತ್ತಾನೆ. ನಂತರ ಅವನನ್ನು ಅರ್ಥಿಸಿದರೆ ಆಗ ಅವನು ಕೊಡುವುದು ನಡೆಯುತ್ತಿದೆ. ಪ್ರಪಂಚ ವಿಷಯದಲ್ಲಿ ಮುಖ್ಯವಾಗಿರುವುದನ್ನಾಗಲೀ, ಮುಖ್ಯವಲ್ಲದಿರುವುದನ್ನಾಗಲೀ ಅರ್ಥಿಸುವುದು ನಡೆಯುತ್ತಿದೆ. ದೇವರ ಹತ್ತಿರ ಸಹ ಮನುಷ್ಯ ಹಾಗೆಯೇ ಅರ್ಥಿಸುತ್ತಿದ್ದಾನೆ. ಆದರೆ ದೇವರ ಹತ್ತಿರ ಅರ್ಥಿಸಬೇಕಾಗಿರುವುದು ಮುಖ್ಯವಾದುದಾದ ಪರಲೋಕ. ಅದನ್ನು **ಮೋಕ್ಷ** ಎಂದು ಕರೆಯುತ್ತಿದ್ದೇವೆ. ಮುಖ್ಯವಾದ ಮುಕ್ತಿಯನ್ನು ಕುರಿತು ಕೇಳುವುದನ್ನು ಪ್ರಾರ್ಥನೆ ಎಂದು ಕರೆಯಬಹುದು. 'ಪ್ರ' ಎಂದರೆ ಮುಖ್ಯವಾದ ಎಂದು, ಆರ್ಥನೆ ಎಂದರೆ ಕೇಳಿಕೊಳ್ಳುವುದು ಎಂದು ಹೇಳಬಹುದು. ಪ್ರ+ಅರ್ಥನೆ= ಪ್ರಾರ್ಥನೆ ಎಂದು ಕರೆಯುತ್ತಿದ್ದೇವೆ. ಆದರೇ ಈ ದಿನ ಬಹಳ ಜನ ಮುಖ್ಯ

ವಾಗದಿರುವುದನ್ನು ದೇವರ ಹತ್ತಿರ ಕೇಳುತ್ತಾ, ಅದನ್ನೂ ಸಹ ಪ್ರಾರ್ಥನೆ ಎಂದು ಕರೆಯುತ್ತಿದ್ದಾರೆ. ಮುಖ್ಯವಲ್ಲದಿರುವುದನ್ನು ಕೇಳುವುದು ದೇವರಿಗೂ ಸಹ ಸರಿಹೋಗುವುದಿಲ್ಲ. ಅಷ್ಟೇ ಅಲ್ಲದೆ ಎಲ್ಲರನ್ನು ಹೊಗಳಿದಂತೆ ತನ್ನನ್ನು ಹೊಗಳುವುದು, ಎಲ್ಲರನ್ನೂ ಕೇಳಿದಂತೆ ತನ್ನನ್ನು ಕೇಳುವುದು ದೇವರಿಗೆ ಯಾವ ಮಾತ್ರ ಸರಿಹೋಗಲಿಲ್ಲ. ಹಾಗೆ ಮಾಡುವುದರಿಂದ ಮನುಷ್ಯರನ್ನು, ದೇವರನ್ನು ಬೆರೆಸಿದಂತಾಗುತ್ತದೆ.

ಮನುಷ್ಯರಲ್ಲಿ ಹಿಂದೂಗಳು ಧ್ಯಾನ ಎಂದೂ, ಕ್ರೈಸ್ತರು ಪ್ರಾರ್ಥನೆ ಎಂದು, ಮುಸ್ಲಿಮ್‌ರು ನಮಾಜ್ ಎನ್ನುವ ಹೆಸರುಗಳಿಂದ ಮಾಡುವ ಆರಾಧನೆಗಳು ಯಾವುವೂ ದೇವರಿ (ಅಲ್ಲಾಹ್) ಗೆ ಸರಿಹೋಗುವುದಿಲ್ಲ. ಆದ್ದರಿಂದ ಮೂರು ಮತಗಳಲ್ಲಿ ಇರುವ ಮನುಷ್ಯರಿಗೆ ತನ್ನನ್ನು ಹೇಗೆ ಆರಾಧಿಸಬೇಕೋ ತಿಳಿಸುತ್ತಾ ಈ ದಿನ ದೇವರ ವಿಧಾನದಲ್ಲಿ ಮಾಡುವ ಆರಾಧನೆಗಳೆಲ್ಲವೂ ಯಾವುವೂ ತನಗೆ ಸರಿಹೋಗುವುದಿಲ್ಲವೆಂದು, ತನಗೆ ಇಷ್ಟವಿಲ್ಲವೆಂದು ತಿಳಿಸಿ ತನಗೆ ಇಷ್ಟವಾದ ವಿಧಾನವನ್ನು ಪ್ರಜೆಗಳಿಗೆ ತನ್ನ ಗ್ರಂಥಗಳ ಮೂಲಕ ತಿಳಿಸಿದ್ದಾನೆ. ಮನುಷ್ಯ ತನ್ನೊಂದಿಗೆ ಸೇರಬೇಕೆಂದು ಅಂದುಕೊಳ್ಳುವುದೇ ತನಗೆ ಇಷ್ಟವೆಂದು, ಉಳಿದ ಯಾವುವೂ ತನಗೆ ಇಷ್ಟವಿಲ್ಲ ವೆಂದು ತಿಳಿಸಿದ್ದಾನೆ. ಅದೇ ವಿಷಯವನ್ನೇ ತನ್ನ ಗ್ರಂಥಗಳಲ್ಲಿ ಬೆರೆಯುವಿಕೆ ಅಥವಾ ಐಕ್ಯ ಎನ್ನುವ ಅರ್ಥದಿಂದ ತನ್ನ ಪ್ರಾರ್ಥನೆಯನ್ನು ಕುರಿತು ಹೇಳಿದ್ದಾನೆ. ದೇವರು ತನ್ನ ಮೂರು ಗ್ರಂಥಗಳಲ್ಲಿ ಹೇಳಿದ್ದನ್ನು ಈ ದಿನ ಹೊಸ ನಮಾಜ್ ಎಂದು ಕರೆಯುತ್ತಿದ್ದೇವೆ. ಹಳೆ ನಮಾಜ್ ಮನುಷ್ಯರು ಸೃಷ್ಟಿಸಿಕೊಂಡಿರುವುದು. ಹೊಸ ನಮಾಜ್ ದೇವರು ಸೃಷ್ಟಿಸಿರುವುದು. ಆದ್ದರಿಂದ ದೈವ ಗ್ರಂಥಗಳಲ್ಲಿ ಹೊಸ ನಮಾಜ್‌ನ್ನು ನೆಲೆಗೊಳಿಸಿ ಎಂದು ಹೇಳಿದ್ದಾನೆ ಆದರೆ, ಹಳೆ ನಮಾಜ್‌ನ್ನು ಕುರಿತು ಎಲ್ಲೂ ಏನು ಹೇಳಲಿಲ್ಲ. ಹಳೆ ನಮಾಜ್ ಮುಸ್ಲಿಮ್‌ರಲ್ಲಿ, ಧ್ಯಾನ ಹಿಂದೂಗಳಲ್ಲಿ, ಪ್ರಾರ್ಥನೆ ಎನ್ನುವ ಹೆಸರುಗಳೊಂದಿಗೆ ಕ್ರೈಸ್ತರಲ್ಲಿ ಇರುವುದು ಸಹಜವೇ. ಆದರೇ ಮೂರು ಮತಗಳ ಪ್ರಜೆಗಳಲ್ಲಿ ಎಲ್ಲರೂ ಧ್ಯಾನ, ಪ್ರಾರ್ಥನೆ,

ನಮಾಜ್‌ಗಳನ್ನು ಆಚರಿಸುತ್ತಿಲ್ಲ. ದೇವರ ಭಯ ಇರುವವರು ಕೆಲವರು, ಹಾಗೇ ದೇವರ ಮೇಲೆ ಭಕ್ತಿ ಇರುವವರು ಕೆಲವರೂ ಅಂದರೆ ದೇವರ ಮೇಲೆ ಭಕ್ತಿಯಿಂದಲೋ, ಭಯದಿಂದಲೋ ಪ್ರಾರ್ಥನೆ ಮಾಡುತ್ತಿದ್ದಾರೆ. ಮತ್ತೆ ಕೆಲವರು ಲಾಭಕ್ಕೋಸ್ಕರ ಮಾಡುತ್ತಿದ್ದಾರೆ. ಹೇಗೆ ಮಾಡಿದರೂ ನೂರಕ್ಕೆ ನೂರು ಮಂದಿ ದೇವರ ಆರಾಧನೆಗಳು ಮಾಡುತ್ತಿಲ್ಲ. ಕೆಲವರು ಮಾತ್ರವೇ ಆರಾಧನೆ ಮಾಡುತ್ತಿದ್ದಾರೆ. ಕೆಲವರು ದೇವರಿದ್ದಾರೆಂದು ನಂಬಿಕೆ ಇದ್ದರೂ ಆರಾಧನೆಗಳು ಮಾಡದಂತಿದ್ದಾರೆ. ಕೆಲವರು ದೇವರಿದ್ದಾನೆನ್ನುವ ನಂಬಿಕೆ ಸಹ ಇಲ್ಲದಂತೆ ನಾಸ್ತಿಕರಾಗಿ ಸಹ ಇದ್ದಾರೆ. ಅವರು ಆರಾಧನೆಗಳು ಮಾಡುವುದಿಲ್ಲ. ಆರಾಧನೆಗಳಲ್ಲಿ ಭಾಗವಹಿಸುವುದಿಲ್ಲ.

ಭಾರತದೇಶದಲ್ಲೇ ಮೊಟ್ಟಮೊದಲು ದೇವರು ಮತ್ತು ದೆವ್ವವನ್ನು ಕುರಿತು ತಿಳಿದಿದೆ. ಆಗ ಹಿಂದೂ ಸಮಾಜ ಇದೆ. ಆಗ ಕೆಲವರು ಜ್ಞಾನಿಗಳು ತಮಗಿರುವ ಜ್ಞಾನದಿಂದ ದೆವ್ವವನ್ನು ಬಿಟ್ಟು ದೇವರನ್ನು ಆರಾಧಿಸಬೇಕೆಂದು ತಿಳಿದುಕೊಂಡಿದ್ದಾರೆ. ಆ ಕ್ರಮದಲ್ಲಿ ದೇವರು ಯಾರೋ ತಿಳಿಯದೇ ದೆವ್ವಗಳನ್ನು ಅನೇಕ ದೇವತೆಗಳಾಗಿ ಆರಾಧಿಸುವುದಕ್ಕೆ ಪ್ರಾರಂಭಿಸಿದ್ದಾರೆ. ಆ ಸಮಯದಲ್ಲಿ ದೇವರು ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದಕ್ಕೆ ಆಕಾಶವಾಣಿ ಮೂಲಕ ಜ್ಞಾನವನ್ನು ಕಳುಹಿಸುವುದು, ಕೊನೆಗದು ಸೂರ್ಯನಿಂದ ಭೂಮಿಗೆ ಸೇರುವುದು ನಡೆದಿದೆ. ಆದರೂ ಭೂಮಿಮೇಲೆ ದೇವರ ಜ್ಞಾನ ಮನುಷ್ಯರೆಲ್ಲರಿಗೂ ತಿಳಿಯುವುದಕ್ಕೆ ಬಹಳ ಕಾಲ ಹಿಡಿದಿದೆ. ಕೆಲವರಿಗೆ ದೇವರ ಜ್ಞಾನ ತಿಳಿದರೂ ಮೊದಲಿನಿಂದ ಅಭ್ಯಾಸವಾಗಿರುವಂತಹ ಕೆಲಸಗಳನ್ನೇ ಮಾಡುತ್ತಾ ದೈವಜ್ಞಾನ ತಿಳಿಯುವವರೆಗೇ ಎನ್ನುವಂತಿದ್ದರು. ಕೆಲವರು ಮಾತ್ರ ದೈವ ಜ್ಞಾನ ತಿಳಿದು, ಜ್ಞಾನದ ಪ್ರಕಾರ ನಡೆದುಕೊಳ್ಳುತ್ತಿದ್ದರು. ಮೊದಲು ದೈವಜ್ಞಾನ ಸ್ವಲ್ಪಮಟ್ಟಿಗೆ ಭಾರತದೇಶವೆಲ್ಲಾ ಹರಡಿದರೂ ನಂತರ ಮಾಯೆ ಪ್ರಭಾವದಿಂದ ಜ್ಞಾನ, ಅಜ್ಞಾನಗಳ ಮಧ್ಯದಲ್ಲಿ ಕೆಲವರು ಅತ್ತ, ಕೆಲವರು ಇತ್ತ ಬದಲಾಗುತ್ತಾ ಕೊನೆಗೆ ಅಜ್ಞಾನವೇ ಹೆಚ್ಚಾಗಿ ಬೆಳೆದು ಹೋಗಿದೆ.

ಅಂತಹ ಪರಿಸ್ಥಿತಿಗಳಲ್ಲಿ ಮನುಷ್ಯ ದೇವರ ಹತ್ತಿರದಿಂದ ಸ್ವಲ್ಪ ಜನ, ದೇವತೆಗಳ ಹತ್ತಿರದಿಂದ ಬಹಳ ಜನ ಕೋರಿಕೆಗಳನ್ನು ಕೋರಲು ಆರಂಭ ಮಾಡಿದ್ದಾರೆ. ಇತರರನ್ನು ಏನಾದರೂ ಕೇಳುವಾಗ ಕೇಳುವವರು ಕೇಳಬೇಕಾದವನ ಮೆಚ್ಚುಗೆಯನ್ನು ಹೊಂದಿದರೆ ಕೇಳಿದ್ದನ್ನು ತಪ್ಪದೆ ಕೊಡುತ್ತಾನೆನ್ನುವ ಉದ್ದೇಶದಿಂದ ಕೋರಿಕೆಗಳೊಂದಿಗೆ ಕೂಡಿಕೊಂಡವರು ತಮ್ಮನ್ನು ಆರಾಧಿಸುವ ದೇವರನ್ನಾಗಲೀ, ದೇವತೆಗಳನ್ನಾಗಲೀ ಮೊದಲು ಚೆನ್ನಾಗಿ ಹೊಗಳುತ್ತಿದ್ದರು. ನಂತರ ತಮ್ಮ ಕೋರಿಕೆಗಳನ್ನು ತಿಳಿಸಿ ಕೇಳುತ್ತಿದ್ದರು. ಅದನ್ನೇ ಮೊದಲು ಆರಾಧನ ಎಂದು ಕರೆದಿದ್ದಾರೆ. ಆ ದಿನಗಳಲ್ಲಿ ಧನವೇ ಎಲ್ಲದಕ್ಕೂ ಮೂಲವೆಂದು ಧನವಿದ್ದರೇ ಎಲ್ಲ ಕೆಲಸಗಳು ನಡೆಯುತ್ತವೆಂದು ತಿಳಿದು ದೇವತಾ ಪೂಜೆಯಲ್ಲಾಗಲೀ, ದೇವರ ಪೂಜೆಯಲ್ಲಾಗಲೀ ಕೊನೆಗೆ ಧನವನ್ನೇ ಕೋರುತ್ತಿದ್ದರು. ಧನವನ್ನು ಕೋರುವುದಕ್ಕೆ ಮಾಡಬೇಕಾದ ಆರಾಧನೆಗಳನ್ನು ಮನುಷ್ಯ ಏರ್ಪಡಿಸಿ ಕೊಂಡಿದ್ದಾನೆ. ಆ ದಿನ ಈ ದಿನ, ಮಾಡುವ ಪೂಜೆಗಳನ್ನು ಆರಾಧನೆ ಎನ್ನುವುದರಲ್ಲಿ ಅರ್ಥವಿದೆ. ಆರಾಧನೆ ಪದವನ್ನು ವಿಭಜಿಸಿ ನೋಡಿದರೆ ಕೊನೆಯಲ್ಲಿ 'ಧನ' ಯೆಂದು ಇದೆ. ದೇವತೆಗಳ ಹತ್ತಿರ ತಮಗೆ ಬೇಕಾದ ಧನಕ್ಕೋಸ್ಕರ ಆರಾ ತೆಗೆಯುವುದನ್ನು ಆರಾಧನ ಎಂದು ಹೇಳುವುದು ನಡೆಯುತ್ತಿದೆ. ಮೊದಲು ಆ ವಿಧವಾಗಿ ದೇವತೆಗಳ ಹತ್ತಿರ ಆರಾಧನಗಳು ತಯಾರಾದಾಗ, ಕೊನೆಗೆ ದೇವರ ಹತ್ತಿರ ಸಹ ಅದೇ ಆರಾಧನೆಯನ್ನು ಮಾಡುವುದಕ್ಕೆ ಶುರು ಮಾಡಿದ್ದಾರೆ. ವಾಸ್ತವವಾಗಿ ದೇವರ ಹತ್ತಿರ ಮಾಡುವ ಆರಾಧನೆಗಳು ಬೇರೆ, ದೇವತೆಗಳ ಹತ್ತಿರ ಮಾಡುವ ಆರಾಧನೆಗಳು ಬೇರೆ.

ದೇವತೆಗಳ ಹತ್ತಿರ ಮಾಡುವ ಆರಾಧನೆ ಪ್ರಪಂಚ ಧನವನ್ನು ಆಶಿಸಿ ಮಾಡುವುದು ಎಂದು ಹೇಳಬಹುದು. ಅದೇ ದೇವರ ಹತ್ತಿರ ಮಾಡುವ ಆರಾಧನ ಜ್ಞಾನಧನವನ್ನು ಆಶಿಸಿ ಮಾಡುವುದೆಂದು ಹೇಳಬಹುದು. ಎರಡೂ ಆರಾಧನೆಗಳೇ ಆದರೂ ಒಂದು ದೇವರ ಹತ್ತಿರ, ಎರಡನೆಯದು ದೇವತೆಗಳ ಹತ್ತಿರ ಮಾಡುವುದಾಗಿ ಇದೆ. ಇದನ್ನನುಸರಿಸಿ ಆರಾಧನೆಗಳು ಎರಡು

ವರ್ಗಗಳೆಂದು ಹೇಳಬಹುದು. ದೇವರ ಹತ್ತಿರ ಮಾಡುವ ಆರಾಧನ ಜನ್ಮಗಳು ಇಲ್ಲದ ಮೋಕ್ಷ ಸ್ಥಿತಿಗೆ ಅಂದರೆ ಪರಲೋಕಕ್ಕೆ ತೆಗೆದುಕೊಂಡು ಹೋಗುವುದು. ದೇವತೆಗಳ ಹತ್ತಿರ ಮಾಡುವ ಆರಾಧನೆ ಜನ್ಮಗಳಿಗೆ ತೆಗೆದುಕೊಂಡು ಹೋಗುವುದಾಗಿ ಇದೆ. ಮನುಷ್ಯರು ಹೆಚ್ಚಾಗಿ ಜನ್ಮಗಳುಂಟುಮಾಡುವ ದೇವತಾ ಆರಾಧನೆಗಳನ್ನೇ ಮಾಡುತ್ತಿದ್ದಾರೆ. ಜನ್ಮಗಳು ಇಲ್ಲದಂತೆ ಮಾಡುವ ಆರಾಧನೆಗಳನ್ನು ದೇವರು ನಿರ್ಣಯ ಮಾಡಿ ಹೇಳಿದ್ದಾನೆ. ದೇವರು ಹೇಳಿದಂತೆ ಮಾಡುವ ಆರಾಧನೆಗಳು ಜನ್ಮಗಳು ಇಲ್ಲದಂತೆ ಮಾಡುವವು. ಆದ್ದರಿಂದ ಅಂತಹ ಆರಾಧನೆಗಳನ್ನು **"ನಮಾಜ್"** ಎಂದು ಹೆಸರಿಟ್ಟು ಕರೆಯುವುದು ನಡೆದಿದೆ. ನಮಾಜ್ ಎಂದರೆ ಜನ್ಮಗಳು ಇಲ್ಲದಂತೆ ಹೋಗುವುದು ಎಂದು ಅರ್ಥವನ್ನು ತಿಳಿಸುತ್ತಿದೆ. **'ನ'** ಎಂದರೆ ಬೇಡ, **'ಮ'** ಎಂದರೆ ನನಗೆ, **'ಜ'** ಎಂದರೆ ಜನ್ಮಗಳು ಎಂದು ಹೇಳಬಹುದು. ದೇವರ ಆರಾಧನೆಯನ್ನು ನಮಾಜ್ ಎಂದು ಪೂರ್ವದಲ್ಲಿ ಕೃತಯುಗದಲ್ಲೇ ಹಿಂದೂಗಳು ಹೇಳುತ್ತಿದ್ದರು. ಭೂತಕಾಲದಲ್ಲಿ ಇಲ್ಲ, ಭವಿಷ್ಯತ್ ಕಾಲದಲ್ಲಿ ಇಲ್ಲ ಎಂದು ಹೇಳುವುದಕ್ಕೆ "ನ ಭೂತೋ ನ ಭವಿಷ್ಯತ್" ಎಂದು ಹೇಳಿದ ಹಾಗೆ "ಜನ್ಮಗಳ ವಿಷಯದಲ್ಲಿ ಜನ್ಮಗಳು ಬೇಡ, ಜನ್ಮಗಳು ಇಲ್ಲ" ಎಂದು ಹೇಳುವುದಕ್ಕೆ ನಮಾಜ್ ಎಂದು ಹೇಳಿದ್ದಾರೆ. ಜನ್ಮಗಳು ಇಲ್ಲದಂತೆ ದೇವರೊಳಗೆ ಐಕ್ಯವಾಗುವ ಕೋರಿಕೆಯನ್ನು ತಿಳಿಸುವುದೇ ನಮಾಜ್ ಎಂದು ಅರ್ಥ. ಆದರೇ ಈ ದಿನ ದೇವರ ಪ್ರಾರ್ಥನೆ ಯಲ್ಲಿ ಸಹ ಯಾವುದೋ ಪ್ರಪಂಚ ಕೋರಿಕೆಗಳನ್ನು ಆಶಿಸಿ ಮಾಡುವ ಆರಾಧನೆಯನ್ನು ನಮಾಜ್ ಎಂದು ಅನ್ನುತ್ತಿದ್ದಾರೆ.

ಪ್ರಪಂಚ ಧನವನ್ನು ಆಶಿಸಿ ದೇವತೆಗಳನ್ನು ಪೂಜಿಸುವವರು ತಮ್ಮ ಪೂಜೆಗಳನ್ನು ಆರಾಧನೆ ಎಂದು ಅಂದಹಾಗೆ ಹಾಗೇ ಪರಮಾತ್ಮ ಧನವನ್ನು ಆಶಿಸಿ ಪೂಜಿಸುವವರು ಸಹ ತಮ್ಮದು ಆರಾಧನೆಯೇ ಎಂದು ಹೇಳುತ್ತಿದ್ದಂತೆ ಎರಡು ವಿಧಗಳ ಆರಾಧನೆಗಳನ್ನು ದೇವರು, ದೇವತೆಗಳ ಬಗ್ಗೆ ಮಾಡಿದಂತೆ, ಎರಡು ವಿಧಗಳ ನಮಾಜ್‌ಗಳನ್ನು ದೇವರ ಹತ್ತಿರ ಮಾಡುತ್ತಿದ್ದಾರೆ. ಅದನ್ನೇ

ಖುರಾನ್ ಗ್ರಂಥದಲ್ಲಿ (4–103) ರಲ್ಲಿ ಇರುವ ಎಲ್ಲರೂ ಮಾಡುವ ಹಳೆ ನಮಾಜ್ ಎಂದೂ, ಒಬ್ಬ ಮನುಷ್ಯ ಆದರೂ ಹೊಸದಾಗಿ ನೆಲೆಗೊಳಿಸುವ ಅದನ್ನು ಹೊಸ ನಮಾಜ್ ಎಂದೂ ಎರಡು ವಿಧಗಳು ಇವೆ. ಆ ಎರಡು ವಿಧಗಳು ತಿಳಿಯದೆ ಮುಸ್ಲಿಮ್‌ರು ನಮಾಜ್ ಒಂದೇ ಎಂದು ಅಂದು ಕೊಂಡಿದ್ದಾರೆ.

ದ್ವಾಪರ ಯುಗದವರೆಗು ಭೂಮಿಮೇಲೆ ಮತಗಳು ಇಲ್ಲ. ಇರುವ ವರೆಲ್ಲರೂ ಇಂದೂಗಳೇ ಆಗಿರುವುದರಿಂದ ಈ ದೇಶವನ್ನು ಇಂದೂ ದೇಶ ಎಂದಿದ್ದಾರೆ. ಇಂದೂ ಎನ್ನುವ ಹೆಸರೊಂದಿಗೆ ಇಂದೂಗಳು ಇರುತ್ತಿದ್ದರು. ಈ ಮಧ್ಯ ಕಾಲದಲ್ಲಿ ಸುಮಾರು 100 ರಿಂದ 150 ವರ್ಷಗಳ ಕೆಳಗೆ **'ಇಂದೂ'** ಎನ್ನುವ ಶಬ್ದ, **'ಹಿಂದೂ'** ಎನ್ನುವ ಶಬ್ದವಾಗಿ ಬದಲಾಗಿದೆ. ಕಲಿಯುಗ ಪ್ರಾರಂಭವಾದ ನಂತರ ಮೂರು ಸಾವಿರ ವರ್ಷಗಳಿಗೆ ಮತಗಳು ಎನ್ನುವವು ಹುಟ್ಟಿ ಬಂದಿವೆ. ಹಾಗೆ ಹುಟ್ಟಿರುವವುಗಳಲ್ಲಿ ಮೊದಲನೆಯದು ಕ್ರೈಸ್ತವ ಮತ ಮೊದಲು ಅದು ಸಂಘವಾಗಿ ತಯಾರಾಗಿ, ಕ್ರೈಸ್ತವ ಸಂಘದ ಗುಂಪು ಬೆಳೆದಂತೆಲ್ಲಾ ಅದು ಮತವಾಗಿ ಬದಲಾಗಿದೆ. ಕ್ರೈಸ್ತವ ಮತ ತಯಾರಾದ ನಂತರ ಇಂದೂ ಸಮಾಜವಾಗಿ ಇರುವವರು ತಮ್ಮದು ಇಂದೂ ಮತವೆಂದು ಹೇಳಿದ್ದಾರೆ. ಹೀಗೆ ಇಂದೂ ಮತವಾಗಿ ತಯಾರಾಗುವವರೆಗು ಇಂದೂ ಸಮಾಜವಾಗಿ ಇರುವವರು ತಮ್ಮ ಕೋರಿಕೆಗಳ ನಿಮಿತ್ತ ಅನೇಕ ದೇವತೆಗಳನ್ನು ಆಶ್ರಯಿಸಿ ಅವರನ್ನು ಆರಾಧಿಸುವುದು ನಡೆಯುತ್ತಿತ್ತು. ಅಂದಿನ ದೇವತೆಗಳನ್ನು ಆರಾಧಿಸಬಾರದೆಂದು ಕಲಿಯುಗ ಆರಂಭದಲ್ಲಿಯೇ ತೌರಾತ್ ಜ್ಞಾನ (ಭಗವದ್ಗೀತೆ ಜ್ಞಾನ) ಹೊರಗೆ ಬಂದಿದೆ. ಆದರೂ ತೌರಾತ್ ಜ್ಞಾನವನ್ನು ಕೆಲವರೇ ಅರ್ಥಮಾಡಿಕೊಂಡು ದೇವರು ಬೇರೆ, ದೇವತೆಗಳು ಬೇರೆ ಎಂದು ತಿಳಿದರೂ ಬಹಳ ಜನ ದೇವತಾರಾಧಕರೆ ಇರುತ್ತಿದ್ದರು. ಆ ದಿನ ತೌರಾತ್ ಜ್ಞಾನದಿಂದ ದೇವರು, ದೇವತೆಗಳು ಎಂದು ಎರಡು ಭಾಗಗಳು ಮಾಡಿ, ದೇವರ ಆರಾಧನೆ ಬೇರೆ, ದೇವತೆಗಳ ಆರಾಧನೆ ಬೇರೆಯೆಂದು ಹೇಳಿದ್ದರೂ, ಪ್ರಪಂಚ ಧನವನ್ನು

ಕೊಡುವ ದೇವತೆಗಳನ್ನೇ ಆಶ್ರಯಿಸಿ ಆರಾಧಿಸುವುದು ಪ್ರಜೆಗಳಿಗೆ ಅಭ್ಯಾಸವಾಗಿ ಹೋಗಿದೆ.

ಕಲಿಯುಗದಲ್ಲಿ ಭಗವದ್ಗೀತೆ ಪ್ರಥಮ ದೈವ ಗ್ರಂಥವಾಗಿ ಹೊರಗೆ ಬಂದರೂ, ಅದಕ್ಕೂ ಮೊದಲು ಯುಗಗಳಿಂದ ದೇವತಾ ಪೂಜೆಗಳಿಗೆ ಅಭ್ಯಾಸವಾದ ಪ್ರಜೆಗಳು ಭಗವದ್ಗೀತಾ ಮಾತನ್ನು ಲೆಕ್ಕಮಾಡದೆ ದೇವತಾ ರಾಧನೆಗಳಲ್ಲೇ ಆಸಕ್ತಿಯನ್ನು ತೋರಿಸುತ್ತಿದ್ದರು. ಹಾಗಿರುವಾಗ ದೇವತಾ ರಾಧನೆಗಳಲ್ಲಿ ಎರಡು ಆರಾಧನೆಗಳು ಹೆಸರು ಪಡೆದಿದ್ದವು. ಈ ಎರಡು ಆರಾಧನೆಗಳನ್ನು ಹೆಸರಿನಿಂದ ಕರೆಯುತ್ತಿದ್ದರೂ ಅವುಗಳಲ್ಲಿ ವ್ಯತ್ಯಾಸಗಳಿದ್ದವು. ಆ ವ್ಯತ್ಯಾಸಗಳನ್ನನುಸರಿಸಿ ಅವುಗಳಿಗೆ ಹೆಸರುಗಳನ್ನು ಸಹ ಇಟ್ಟಿದ್ದಾರೆ. ಅವುಗಳನ್ನು ಯಜ್ಞಗಳು ಮತ್ತು ತಪಸ್ಸುಗಳಾಗಿ ಹೇಳುತ್ತಿದ್ದರು. ಯಜ್ಞಗಳು ದೇವತಾರಾಧನೆಗಳಲ್ಲಿ ಒಂದಾದ ಯಜ್ಞಗಳನ್ನು ಮಾಡುವ ವಿಧಾನ ಬೇರೆ, ತಪಸ್ಸುಗಳನ್ನು ಮಾಡುವ ವಿಧಾನ ಬೇರೆಯಾಗಿ ಇತ್ತು. ತಪಸ್ಸು ಮಾಡುವುದರಲ್ಲಿ ಯಾವುದೋ ಒಂದು ನೆನಪಿಸಿಕೊಳ್ಳುವುದೊ, ಜಪಿಸುವುದೋ ನಡೆಯುತ್ತಿರುತ್ತದೆ. ತಪಸ್ಸು ಮಾಡುವವರು ಜಪಿಸುವ ಮಂತ್ರವಾಗಲಿ, ನೆನಪಿಸಿಕೊಳ್ಳುವ ಮಾತಾಗಲೀ ಹೊರಗೆ ತಿಳಿಯದಂತೆ ಜಪಿಸುತ್ತಿದ್ದರು. ತಪಸ್ಸು ಬಹಳ ಮಟ್ಟಿಗೆ ಮೌನವಾಗಿ ಸಾಗುತ್ತಿತ್ತು. ಯಜ್ಞಗಳಿಗಿಂತ ತಪಸ್ಸುಗಳು ಮಾಡುವವರು ದೊಡ್ಡವರು ಎನ್ನುವ ಭಾವನೆ ಇರುತ್ತಿತ್ತು. ತಪಸ್ಸು ಮಾಡುವವರು ತಪಶ್ಶಕ್ತಿಯನ್ನು ಹೊಂದುತ್ತಿದ್ದರು. ತಪಶ್ಶಕ್ತಿಗೆ ದೇವತೆಗಳು ಸಹ ಭಯಪಡುತ್ತಿದ್ದರು. ದೇವತೆಗಳನ್ನು ಆರಾಧಿಸಿದಾಗ ಬಂದಿರುವ ತಪಶ್ಶಕ್ತಿಗೆ ದೇವತೆಗಳೇ ಎದರುತ್ತಿದ್ದರೆಂದರೆ ದೇವತೆಗಳ ಆರಾಧನೆಗಳಲ್ಲಿ ದೊಡ್ಡ ಆರಾಧನೆ ತಪಸ್ಸೆಂದು ಹೇಳಬಹುದು. ಇದು ಯಾರಿಗೆ ಅವರು ಮಾಡುವುದೇ ಹೊರತು, ಸಾಮೂಹಿಕವಾಗಿ ಮಾಡುವುದು ಅಲ್ಲ. ಯಾರ ಸಹಾಯ ಇಲ್ಲದಂತೆ ಮಾಡುವುದು ತಪಸ್ಸು.

ಯಜ್ಞಗಳನ್ನು ಮಾಡುವುದು ಒಂದು ವಿಧವಾದ ದೇವತಾರಾಧನೆಯೇ ಎಂದು ಹೇಳಬಹುದು. ಮೊದಲೇ ಒಂದು ಕೋರಿಕೆಯನ್ನು ಉದ್ದೇಶದಲ್ಲಿಟ್ಟು

